CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ನವೆಂಬರ್ ೨೭, ೨೦೦೩ (ಮಾರ್ಗಶಿರ ೬, ಶಕ ವರ್ಷ ೧೯೨೫) | ಸಂಚಿಕೆ ೪೭ |
|---|---|---|

## ಭಾಗ - ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು**

**ವಿಷಯ:** ಆಯೋಗವು ನಡೆಸಿದ 2001ನೇ ಸಾಲಿನ ದ್ವಿತೀಯ ಅಧಿವೇಶನದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ-1 ಮತ್ತು 2ರ ಇಲಾಖಾ ಪರೀಕ್ಷೆಗಳಿಗೆ ಅಭ್ಯರ್ಥಿಯಾಗಿದ್ದ ಶೀ ಮೊಹಮ್ಮದ್ ರಾಜಾಸಾಬ್ ವಾಡೀಕರ್ (ನೋಂದಣಿ ಸಂಖ್ಯೆ:64443) ಹಾಗೂ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ-1ರ ಪರೀಕ್ಷೆಗಳಿಗೆ ಅಭ್ಯರ್ಥಿಯಾಗಿದ್ದ ಶ್ರೀಮತಿ ರುಖಿಯಾ ಬೇಗಂ(ನೋಂದಣಿ ಸಂಖ್ಯೆ:64444) ಎಂಬುವವರು ಸದರಿ ಪರೀಕ್ಷೆಗಳಲ್ಲಿ ಎಸಗಿದ್ದ ದುರಾಚಾರ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ-ಆದೇಶ.

**ಓದಲಾಗಿದೆ:** 1. ಶ್ರೀ ಮೊಹಮ್ಮದ್ ರಾಜಾಸಾಬ್ ವಾಡೀಕರ್ ಮತ್ತು ಶ್ರೀಮತಿ ರುಖಿಯಾ ಬೇಗಂ ರವರುಗಳ ಅರ್ಜಿ ದಿನಾಂಕ:23.10.2002.

2. ತಿಳುವಳಿಕೆ ಪತ್ರ ಸಂ.ಆರ್.ಹೆಚ್.ಎಸ್. 218/2003-04/ಪಿಎಸ್‌ಸಿ ದಿನಾಂಕ: 16.06.2003.

ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2001ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಗುಲ್ಬರ್ಗಾ ಕೇಂದ್ರದಿಂದ ಶ್ರೀ ಮೊಹಮ್ಮದ್ ರಾಜಾಸಾಬ್ ವಾಡೀಕರ್, ಮುಖ್ಯಪೇದೆ, ಕುರಗುಂಟ ಪೊಲೀಸ್ ಠಾಣೆ, ಗುಲ್ಬರ್ಗಾ ಹಾಗೂ ಶ್ರೀಮತಿ ರುಖಿಯಾ ಬೇಗಂ, ಮುಖ್ಯ ಶಿಕ್ಷಕಿ, ಆಲ್ ಅಮೀನ್ ಉರ್ದುಶಾಲೆ, ಸಂಗ್ರೇಶ್‌ವಾಡಿ, ಗುಲ್ಬರ್ಗಾ ಇವರುಗಳು ಅನುಕ್ರಮವಾಗಿ ನೋಂದಣಿ ಸಂಖ್ಯೆ:64443 ಮತ್ತು 64444 ರ ಮೇರೆಗೆ ಅಕೌಂಟ್ಸ್ ಹೈಯರ್ ಹಾಗೂ ಜನರಲ್ ಲಾ ವಿಷಯಗಳಿಗೆ ಅಭ್ಯರ್ಥಿಗಳಾಗಿದ್ದರು. ಅವರುಗಳ ಪೈಕಿ ಶ್ರೀಮತಿ ರುಖಿಯಾ ಬೇಗಂ ಅವರು ಖಾಸಗಿ ಶಾಲೆಯಲ್ಲಿ ಮುಖ್ಯ ಶಿಕ್ಷಕಿಯಾಗಿದ್ದು, ಅವರಿಗೆ ಇಲಾಖಾ ಪರೀಕ್ಷೆಗಳು ಅವಶ್ಯಕವಾಗಿರದಿದ್ದರೂ ಸಹ ಅವರು ಅದನ್ನು ಮರೆಮಾಚಿ ಸದರಿ ಪರೀಕ್ಷೆಗಳಿಗೆ ಹಾಜರಾಗಿರುತ್ತಾರೆ.

ಸದರಿ ಪರೀಕ್ಷೆಗಳ ಉತ್ತರ ಪತ್ರಿಕೆಗಳನ್ನು ಪರಿಶೀಲನೆ ಮಾಡುವ ಸಂದರ್ಭದಲ್ಲಿ ನೋಂದಣಿ ಸಂಖ್ಯೆ:64444ರ ಅಭ್ಯರ್ಥಿಯ ಉತ್ತರ ಪತ್ರಿಕೆಯು ಸಂಬಂಧಿತ ಪರೀಕ್ಷಾ ಕೇಂದ್ರದಿಂದ ಬಂದಿದ್ದ ಬಂಡಲಿನಲ್ಲಿ ಇರದಿದ್ದ ಕಾರಣ ಆ ಬಗ್ಗೆ ಪರೀಕ್ಷಾ ಕೇಂದ್ರದ ಮೇಲ್ವಿಚಾರಕರನ್ನು ಹಾಗೂ ಆಯೋಗದ ಗುಲ್ಬರ್ಗಾದ ಪ್ರಾಂತೀಯ ಕಛೇರಿಯ ಶಾಖಾಧಿಕಾರಿಯವರನ್ನು ಸಂಪರ್ಕಿಸಿ ಉತ್ತರಪತ್ರಿಕೆಯು ಲಭ್ಯವಿಲ್ಲದಿರುವ ಬಗ್ಗೆ ಪರಿಶೀಲಿಸುವಂತೆ ಕೋರಲಾಗಿ, ಅವರುಗಳು ಸದರಿ ಉತ್ತರಪತ್ರಿಕೆಯು ಅವರಲ್ಲಿ ಲಭ್ಯವಿಲ್ಲವೆಂದು ತಿಳಿಸಿರುತ್ತಾರೆ. ಈ ಬಗ್ಗೆ ಹೆಚ್ಚಿನ ಪರಿಶೀಲನೆ ಮಾಡಲಾಗಿ ಸಂಬಂಧಪಟ್ಟ ನಾಮಿನಲ್‌ರೋಲ್ ಹಾಗೂ ನಮೂನೆ "ಎ" ನಲ್ಲಿ ನಮೂದಿಸಲಾದ ಉತ್ತರ ಪತ್ರಿಕೆಯ ಸಂಖ್ಯೆ ಹಾಗೂ ಲಭ್ಯವಿದ್ದ ಅವರ ಉಳಿದ ಪರೀಕ್ಷೆಗಳ ಉತ್ತರ ಪತ್ರಿಕೆಯ ಸಂಖ್ಯೆಗಳನ್ನು ತಿದ್ದಿರುವುದು ಗಮನಕ್ಕೆ ಬಂದಿದ್ದು ಸಂಬಂಧಿತ ಇನ್ನಿತರ ದಾಖಲೆಗಳನ್ನು ಪರಿಶೀಲನೆ ಮಾಡಿದಾಗ ಈ ಇಬ್ಬರು ಅಭ್ಯರ್ಥಿಗಳು ತಮ್ಮ ಉತ್ತರ ಪತ್ರಿಕೆಗಳನ್ನು ಪರಸ್ಪರ ಅದಲು ಬದಲು ಮಾಡಿಕೊಂಡು ಉತ್ತರಿಸಿರುವುದು ಕಂಡು ಬಂದಿರುತ್ತದೆ. ಅದರ ವಿವರಗಳು ಕೆಳಕಂಡಂತಿವೆ:

| ಕ್ರ. ಸಂ. | ವಿಷಯ ಮತ್ತು ಉತ್ತರ ಪತ್ರಿಕೆಯಲ್ಲಿನ ಕ್ರಮ ಸಂಖ್ಯೆ | ಉತ್ತರಪತ್ರಿಕೆಯ ಮುಖಪುಟದಲ್ಲಿ ನಮೂದಿಸಲಾದ ನೋಂದಣಿ ಸಂಖ್ಯೆ ಮತ್ತು ಅಭ್ಯರ್ಥಿಯ ಹೆಸರು | ಗಳಿಸಿದ ಅಂಕಗಳು | ಒಳಗಿನ ಹಸ್ತಾಕ್ಷರ |
|---|---|---|---|---|
| 1 | ಅಕೌಂಟ್ಸ್ ಹೈಯರ್ ಪೇಪರ್–1 0683677 | 64444: ಶ್ರೀಮತಿ ರುಖಿಯಾ ಬೇಗಂ | 23 | ಮೊಹಮ್ಮದ್ ರಾಜಾಸಾಬ್ ವಾಡೀಕರ್ |
| 2 | ಅಕೌಂಟ್ಸ್ ಹೈಯರ್ ಪೇಪರ್–2 0558502 | 64444: ಶ್ರೀಮತಿ ರುಖಿಯಾ ಬೇಗಂ | 19 | ಮೊಹಮ್ಮದ್ ರಾಜಾಸಾಬ್ ವಾಡೀಕರ್ |
| 3 | ಜನರಲ್ ಲಾ ಭಾಗ–1 ಪೇಪರ್–1 0799426 | 64444: ಶ್ರೀಮತಿ ರುಖಿಯಾ ಬೇಗಂ | 25 | ಮೊಹಮ್ಮದ್ ರಾಜಾಸಾಬ್ ವಾಡೀಕರ್ |
| 4 | ಜನರಲ್ ಲಾ ಭಾಗ–1 ಪೇಪರ್–2 0621914 | 64444: ಶ್ರೀಮತಿ ರುಖಿಯಾ ಬೇಗಂ | 23 | ಮೊಹಮ್ಮದ್ ರಾಜಾಸಾಬ್ ವಾಡೀಕರ್ |
| 5 | ಅಕೌಂಟ್ಸ್ ಹೈಯರ್ ಪೇಪರ್–1 683697 | 64443 ಮೊಹಮ್ಮದ್ ರಾಜಾಸಾಬ್ ವಾಡೀಕರ್ | 47 | ಶ್ರೀಮತಿ ರುಖಿಯಾ ಬೇಗಂ |
| 6 | ಅಕೌಂಟ್ಸ್ ಹೈಯರ್ ಪೇಪರ್–2 0683699 | 64443 ಮೊಹಮ್ಮದ್ ರಾಜಾಸಾಬ್ ವಾಡೀಕರ್ | 60 | ಶ್ರೀಮತಿ ರುಖಿಯಾ ಬೇಗಂ |
| 7 | ಜನರಲ್ ಲಾ ಭಾಗ–1 ಪೇಪರ್–1 0799427 | 64443 ಮೊಹಮ್ಮದ್ ರಾಜಾಸಾಬ್ ವಾಡೀಕರ್ | 71 | ಶ್ರೀಮತಿ ರುಖಿಯಾ ಬೇಗಂ |
| 8 | ಜನರಲ್ ಲಾ ಭಾಗ–1 ಪೇಪರ್–2 0621915 | 64443 ಮೊಹಮ್ಮದ್ ರಾಜಾಸಾಬ್ ವಾಡೀಕರ್ | 68 | ಶ್ರೀಮತಿ ರುಖಿಯಾ ಬೇಗಂ |
| 9 | ಜನರಲ್ ಲಾ ಭಾಗ–2 0545385 | 64443 ಮೊಹಮ್ಮದ್ ರಾಜಾಸಾಬ್ ವಾಡೀಕರ್ | 82 | ಶ್ರೀಮತಿ ರುಖಿಯಾ ಬೇಗಂ |

ಮೇಲ್ಕಂಡ ವಿವರಣೆಯಿಂದ ಈ ಇಬ್ಬರು ಅಭ್ಯರ್ಥಿಗಳು ತಮ್ಮ ಉತ್ತರಪತ್ರಿಕೆಗಳನ್ನು ಪರಸ್ಪರ ಬದಲಾಯಿಸಿಕೊಂಡು ಉತ್ತರ ಬರೆಯುವ ಮೂಲಕ ಪರೀಕ್ಷಾ ದುರಾಚಾರದಲ್ಲಿ ತೊಡಗಿರುವುದು ಸ್ಪಷ್ಟವಾಗಿ ಕಂಡುಬಂದ ಕಾರಣ ಉಲ್ಲೇಖ(2)ರಲ್ಲಿ ಓದಲಾದ ದಿನಾಂಕ: 16–06–2003ರ ಕಾರಣ ಕೇಳಿ ನೋಟೀಸ್ ಶ್ರೀ ಮೊಹಮ್ಮದ್ ರಾಜಾಸಾಬ್ ವಾಡೀಕರ್‌ರವರಿಗೆ ಸದರಿ ಅಧಿವೇಶನದ ಅವರ ಇಲಾಖಾ ಪರೀಕ್ಷೆಯ ಫಲಿತಾಂಶವನ್ನು ರದ್ದುಪಡಿಸಿ ಮುಂದೆ ಆಯೋಗವು ನಡೆಸುವ ಯಾವುದೇ ಇಲಾಖಾ ಪರೀಕ್ಷೆಗಳನ್ನು ತೆಗೆದುಕೊಳ್ಳದಂತೆ ಶಾಶ್ವತವಾಗಿ ಏಕೆ ಡಿಬಾರ್ ಮಾಡಬಾರದೆಂದೂ ಹಾಗೂ ಮತ್ತೊಬ್ಬ ಆರೋಪಿಯಾದ ಶ್ರೀಮತಿ ರುಖಿಯಾ ಬೇಗಂ ಅವರಿಗೆ ಸರ್ಕಾರ ನೀಡುವ ಅನುದಾನವನ್ನು ತಡೆಹಿಡಿಯುವಂತೆ ಶಿಕ್ಷಣ ಇಲಾಖೆಗೆ ಏಕೆ ಶಿಫಾರಸ್ಸು ಮಾಡಬಾರದೆಂಬುದರ ಬಗ್ಗೆ ಅವರುಗಳಿಂದ ಸಮಜಾಯಿಷಿ ಕೇಳಲಾಗಿತ್ತು. ಇವರುಗಳು ಸದರಿ Show Cause Notice ಗಳನ್ನು ಸ್ವೀಕರಿಸಿದ್ದರೂ ಅದಕ್ಕೆ ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಇದರಿಂದಾಗಿ ಇವರಿಬ್ಬರೂ ಪರೋಕ್ಷವಾಗಿ ತಮ್ಮ ತಪ್ಪನ್ನು ಒಪ್ಪಿಕೊಂಡಂತಾಗಿರುತ್ತದೆ. ವಿವರಗಳನ್ನು ಪರಿಶೀಲಿಸಿದಾಗ ಮೊದಲನೆಯ ಆರೋಪಿ ಶ್ರೀ ಮೊಹಮ್ಮದ್ ರಾಜಾಸಾಬ್ ವಾಡೀಕರ್ ಗೆ ಶ್ರೀಮತಿ ರುಖಿಯಾ ಬೇಗಂ ಕಾನೂನು ಬಾಹಿರವಾಗಿ ಸಹಾಯ ಮಾಡಿರುವುದು ದೃಢಪಡುತ್ತದೆ.

ಆಯೋಗವು ಈ ಪ್ರಕರಣದ ಸಂದರ್ಭ, ಸನ್ನಿವೇಶ ಹಾಗೂ ಲಭ್ಯವಿರುವ ದಾಖಲೆಗಳ ಆಧಾರದ ಮೇಲೆ ಕೂಲಂಕಷವಾಗಿ ಪರಿಶೀಲಿಸಿ ಆಪಾದಿತ ಅಭ್ಯರ್ಥಿಗಳ ವಿರುದ್ಧ ಮಾಡಲಾದ ಆರೋಪವು ನಿಸ್ಸಂದಿಗ್ದವಾಗಿ ರುಜುವಾತಾಗಿರುವ ಕಾರಣ 1965ರ ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಡೆಸುವಿಕೆ) ನಿಯಮಾವಳಿಗಳ ನಿಯಮ 14 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾದ ಆಯೋಗದ ದಿನಾಂಕ:14–07–1993ರ

ಅಧಿಕೃತಜ್ಞಾಪನ ಸಂಖ್ಯೆ: ಆಡಳಿತ:398/1993-94ರನ್ವಯ ಅವರುಗಳಿಗೆ ಉದ್ದೇಶಿತ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಅದರಂತೆ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1020/2003-04/ಪಿಎಸ್‌ಸಿ, ದಿನಾಂಕ: 12ನೇ ನವೆಂಬರ್ 2003**

1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಡೆಸುವಿಕೆ) ನಿಯಮಾವಳಿಗಳ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ದಿನಾಂಕ: 14-07-1993ರ ಆಯೋಗದ ಅಧಿಕೃತಜ್ಞಾಪನ ಸಂಖ್ಯೆ: ಆಡಳಿತ.398/93-94/ಪಿಎಸ್‌ಸಿ ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಆಪಾದಿತ ಅಭ್ಯರ್ಥಿಗಳಾದ ಶ್ರೀ ಮೊಹಮ್ಮದ್ ರಾಜಾಸಾಬ್ ವಾಡೀಕರ್, ಮುಖ್ಯಪೇದೆ 791, ಕುರುಗುಂಟ ಪೊಲೀಸ್ ಠಾಣೆ, ಗುಲ್ಬರ್ಗಾ ಮತ್ತು ಶ್ರೀಮತಿ ರುಖಿಯಾ ಬೇಗಂ, ಮುಖ್ಯ ಶಿಕ್ಷಕಿ, ಆಲ್ ಅಮೀನ್ ಉರ್ದುಶಾಲೆ, ಸಂಗ್ರೇಶ್‌ವಾಡಿ, ಗುಲ್ಬರ್ಗಾ, ಅವರುಗಳಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸಿದೆ ಹಾಗೂ ಅವರ ವಿರುದ್ಧ ಸೂಚಿತ ಕ್ರಮಗಳನ್ನು ತೆಗೆದುಕೊಳ್ಳಲು ನಿರ್ಧರಿಸಿದೆ:

(1) ಶ್ರೀ ಮೊಹಮ್ಮದ್ ರಾಜಾಸಾಬ್ ವಾಡೀಕರ್ (ನೋಂದಣಿ ಸಂಖ್ಯೆ:64443) ಇವರ 2001ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದು ಪಡಿಸುವುದು (ಆನಲ್‌ಗೊಳಿಸುವುದು) ಹಾಗೂ ಮುಂದೆ ಆಯೋಗವು ನಡೆಸುವ ಯಾವುದೇ ಇಲಾಖಾ ಪರೀಕ್ಷೆಗಳಿಗೆ ಹಾಜರಾಗದಂತೆ ಇವರನ್ನು ಶಾಶ್ವತವಾಗಿ ಡಿಬಾರ್ ಮಾಡುವುದು; ಮತ್ತು

(2) ಶ್ರೀಮತಿ ರುಖಿಯಾ ಬೇಗಂ (ನೋಂದಣಿ ಸಂಖ್ಯೆ:64444) ಇವರ 2001ನೇ ಸಾಲಿನ ದ್ವಿತೀಯ ಅಧಿವೇಶನದ ಅಭ್ಯರ್ಥಿತ್ವವನ್ನು ರದ್ದುಪಡಿಸುವುದು ಮತ್ತು ಇವರಿಗೆ ಇವರು ಮುಖ್ಯೋಪಾಧ್ಯಾಯಿನಿಯಾಗಿ ಕಾರ್ಯನಿರ್ವಹಿಸುತ್ತಿರುವ ಹುದ್ದೆಗೆ ಸರ್ಕಾರವು ನೀಡುತ್ತಿರುವ ಅನುದಾನವನ್ನು ನಿಲ್ಲಿಸುವಂತೆ ಶಿಕ್ಷಣ ಇಲಾಖೆಯನ್ನು ವಿನಂತಿಸುವುದು.

**ಆಯೋಗದ ಆದೇಶದ ಮೇರೆಗೆ,**
ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು**

**ವಿಷಯ:** ಆಯೋಗವು ನಡೆಸಿದ 2001ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಅಭ್ಯರ್ಥಿಗಳಾಗಿದ್ದ ಶ್ರೀ ಬಾಬುಸಾಬ್, ಅಬಕಾರಿ ಉಪನಿರೀಕ್ಷಕರು, (ನೋಂದಣಿ ಸಂಖ್ಯೆ: 77639) ಮತ್ತು ಕೆ.ರಾಜಣ್ಣ, ಶಿಕ್ಷಕರು (ನೋಂದಣಿ ಸಂಖ್ಯೆ:77640) ಇವರುಗಳು ಪರೀಕ್ಷೆಗಳಲ್ಲಿ ಎಸಗಿದ್ದರೆನ್ನಲಾದ ದುರಾಚಾರ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ-ಆದೇಶ.

**ಓದಲಾಗಿದೆ:**
1. ಶ್ರೀ ಬಾಬುಸಾಬ್, ಅವರ ಮನವಿ ದಿನಾಂಕ:13-06-2003.
2. ತಿಳುವಳಿಕೆ ಪತ್ರ ಸಂ.ಆರ್‌ಹೆಚ್‌ಎಸ್ 87/03-04/ಪಿಎಸ್‌ಸಿ ದಿನಾಂಕ: 21-07-2003.
3. ಶ್ರೀ ಬಾಬುಸಾಬ್‌ರವರ ಸಮಜಾಯಿಷಿ ದಿನಾಂಕ:28-07-2003.

ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2001ನೇ ಸಾಲಿನ ದ್ವಿತೀಯ ಅಧಿವೇಶನದ ಅಕೌಂಟ್ಸ್ ಹೈಯರ್, ಎಕ್ಸೈಸ್ ಹಾಗೂ ಜನರಲ್ ಲಾ ಭಾಗ-1 ಮತ್ತು ಜನರಲ್ ಲಾ ಭಾಗ-2ರ ಇಲಾಖಾ ಪರೀಕ್ಷೆಗಳಿಗೆ ಶ್ರೀ ಬಾಬುಸಾಬ್, ಅಬಕಾರಿ ಉಪನಿರೀಕ್ಷಕರು, ಕುಣಿಗಲ್, ಹಾಗೂ ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ-1 ಮತ್ತು ಜನರಲ್ ಲಾ ಭಾಗ-2ರ ಪರೀಕ್ಷೆಗಳಿಗೆ ಶ್ರೀ ಕೆ.ರಾಜಣ್ಣ, ಶಿಕ್ಷಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕುಣಿಗಲ್, ಅವರುಗಳು ಅನುಕ್ರಮವಾಗಿ 77639 ಮತ್ತು 77640 ರ ನೋಂದಣಿ ಸಂಖ್ಯೆಗಳಡಿಯಲ್ಲಿ ಅಭ್ಯರ್ಥಿಗಳಾಗಿದ್ದರು ಆ ಪೈಕಿ ನೋಂದಣಿ ಸಂಖ್ಯೆ:77639ರ ಅಭ್ಯರ್ಥಿಯಾದ ಶ್ರೀ ಬಾಬುಸಾಬ್ ಎಂಬುವರು ಅಕೌಂಟ್ಸ್ ಹೈಯರ್, ಜನರಲ್ ಲಾ ಭಾಗ-2 ಹಾಗೂ ಅಬಕಾರಿ ವಿಷಯಗಳಿಗೂ ಮತ್ತು ನೋಂದಣಿ ಸಂಖ್ಯೆ: 77640ರ ಅಭ್ಯರ್ಥಿಯಾದ ಶ್ರೀ ಕೆ.ರಾಜಣ್ಣ ಎಂಬುವರು ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ-2ರ ವಿಷಯಗಳಿಗೂ ಹಾಜರಾಗಿದ್ದು ಉಳಿದಂತೆ ಜನರಲ್ ಲಾ ಭಾಗ-1ರ ವಿಷಯಕ್ಕೆ ಇಬ್ಬರೂ ಗೈರು ಹಾಜರಾಗಿರುತ್ತಾರೆ.

ನೋಂದಣಿ ಸಂಖ್ಯೆ: 77639ರ ಅಭ್ಯರ್ಥಿಯಾದ ಶ್ರೀ ಬಾಬುಸಾಬ್ ಅವರು ಉಲ್ಲೇಖ(1)ರಲ್ಲಿ ಓದಲಾದ ದಿನಾಂಕ: 13-06-2003ರ ತಮ್ಮ ಮನವಿಯಲ್ಲಿ ಅವರು ಅಕೌಂಟ್ಸ್ ಹೈಯರ್ ವಿಷಯದ ಪರೀಕ್ಷೆಯಲ್ಲಿ ಚೆನ್ನಾಗಿ ಉತ್ತರಗಳನ್ನು ಬರೆದಿದ್ದರೂ ಅನುತ್ತೀರ್ಣರಾಗಿರುವುದು ಅನುಮಾನಾಸ್ಪದ ವಾಗಿರುವುದರಿಂದ ಸದರಿ ವಿಷಯದ ಉತ್ತರ ಪತ್ರಿಕೆಗಳಲ್ಲಿನ ಅಂಕಗಳನ್ನು ಮರುಎಣಿಕೆ ಮಾಡಬೇಕೆಂದು ಕೋರಲಾಗಿ, ಅವರು ಗಳಿಸಿರುವ ಅಂಕಗಳ ಮರು ಎಣಿಕೆಗಾಗಿ ಸದರಿಯವರ ಅಕೌಂಟ್ಸ್ ಹೈಯರ್ ಉತ್ತರಪತ್ರಿಕೆಗಳನ್ನು ತೆಗೆದು ಪರಿಶೀಲಿಸಲಾಗಿ ಪತ್ರಿಕೆ-1 ಮತ್ತು ಪತ್ರಿಕೆ-2ರಲ್ಲಿರುವ ಬರವಣಿಗೆಯು ಒಂದೇ ರೀತಿ ಇರದೆ ಕೈಬರಹದಲ್ಲಿ ಭಿನ್ನತೆ ಕಂಡು ಬಂದ ಕಾರಣ ಅವರು ಬರೆದಿದ್ದ ಅಬಕಾರಿ ವಿಷಯದ ಉತ್ತರ ಪತ್ರಿಕೆಯನ್ನೂ ಸಹ ಪರಿಶೀಲಿಸಲಾಗಿ, ಅಬಕಾರಿ ವಿಷಯದ ಉತ್ತರ

ಪತ್ರಿಕೆಯಲ್ಲಿ ಒಬ್ಬರ ಹಸ್ತಾಕ್ಷರವಿದ್ದು, ಉಳಿದ ವಿಷಯಗಳಾದ ಅಕೌಂಟ್ಸ್ ಹೈಯರ್ ಪತ್ರಿಕೆ–1 ಮತ್ತು ಪತ್ರಿಕೆ–2 ಹಾಗೂ ಜನರಲ್ ಲಾ ಭಾಗ–2ರ ಉತ್ತರ ಪತ್ರಿಕೆಗಳಲ್ಲಿನ ಹಸ್ತಾಕ್ಷರಗಳು ಬೇರೊಬ್ಬರದ್ದಾಗಿದ್ದುದು ಕಂಡು ಬಂದಿರುತ್ತದೆ. ಈ ಹಸ್ತಾಕ್ಷರಗಳನ್ನು ಪರಿಶೀಲನೆ ಮಾಡಲಾಗಿ ಸದರಿ ಕೈ ಬರಹವು ನೋಂದಣಿ ಸಂಖ್ಯೆ:77640ರ ಅಭ್ಯರ್ಥಿಯ ಕೈಬರಹದೊಂದಿಗೆ ಸಾಮ್ಯತೆ ಹೊಂದಿದ್ದು ಕಂಡು ಬಂದಿರುತ್ತದೆ. ಇದರಿಂದ ಈ ಅಭ್ಯರ್ಥಿಗಳಿಬ್ಬರೂ ಉತ್ತರ ಪತ್ರಿಕೆಗಳನ್ನು ಪರಸ್ಪರ ಬದಲಾಯಿಸಿಕೊಂಡು ಉತ್ತರಿಸಿರುವುದು ಸ್ಪಷ್ಟವಾಗಿರುತ್ತದೆ. ಅದರ ವಿವರಗಳು ಈ ಕೆಳಕಂಡಂತಿವೆ:

| ಕ್ರಮ. ಸಂಖ್ಯೆ | ವಿಷಯ ಮತ್ತು ಹಂಚಿಕೆ ಮಾಡಲಾದ ಉತ್ತರಪತ್ರಿಕೆ ಸಂಖ್ಯೆ | ಉತ್ತರಪತ್ರಿಕೆಯ ಮುಖಪುಟದಲ್ಲಿ ನಮೂದಿಸಲಾದನೋಂದಣಿಸಂಖ್ಯೆ ಮತ್ತು ಅಭ್ಯರ್ಥಿಯ ಹೆಸರು | ಗಳಿಸಿದ ಅಂಕಗಳು | ಉತ್ತರ ಪತ್ರಿಕೆಯಲ್ಲಿನ ಹಸ್ತಾಕ್ಷರ |
|---|---|---|---|---|
| 1 | ಅಕೌಂಟ್ಸ್ ಹೈಯರ್ ಪತ್ರಿಕೆ–1 68383 | 77639 ಶ್ರೀ ಬಾಬುಸಾಬ್ | 33 | ಶ್ರೀ ಕೆ.ರಾಜಣ್ಣ |
| 2 | ಅಕೌಂಟ್ಸ್ ಹೈಯರ್ ಪತ್ರಿಕೆ–2 118500 | 77639 ಶ್ರೀ ಬಾಬುಸಾಬ್ | 47 | ಶ್ರೀ ಕೆ.ರಾಜಣ್ಣ |
| 3 | ಜನರಲ್ ಲಾ ಭಾಗ–2 90741 | 77639 ಶ್ರೀ ಬಾಬುಸಾಬ್ | 55 | ಶ್ರೀ ಕೆ.ರಾಜಣ್ಣ |
| 4 | ಅಬಕಾರಿ 99688 | 77639 ಶ್ರೀ ಬಾಬುಸಾಬ್ | 06 | ಶ್ರೀ ಬಾಬುಸಾಬ್ |
| 5 | ಅಕೌಂಟ್ಸ್ ಹೈಯರ್ ಪತ್ರಿಕೆ–1 68382 | 77640 ಶ್ರೀ ಕೆ.ರಾಜಣ್ಣ | 02 | ಶ್ರೀ ಬಾಬುಸಾಬ್ |
| 6 | ಅಕೌಂಟ್ಸ್ ಹೈಯರ್ ಪತ್ರಿಕೆ–2 118499 | 77640 ಶ್ರೀ ಕೆ.ರಾಜಣ್ಣ | 11 | ಶ್ರೀ ಬಾಬುಸಾಬ್ |
| 7 | ಜನರಲ್ ಲಾ ಭಾಗ–2 90749 | 77640 ಶ್ರೀ ಕೆ.ರಾಜಣ್ಣ | 00 | ಶ್ರೀ ಬಾಬುಸಾಬ್ |

ಮೇಲಿನ ವಿವರಗಳನ್ನು ಗಮನಿಸಿದಾಗ ಅಭ್ಯರ್ಥಿ ಬಾಬುಸಾಬ್ ಅವರು ಹೆಚ್ಚು ಅಂಕಗಳಿಸಲೋಸುಗ ಮಾಡಿರುವ ಪೂರ್ವಯೋಜಿತ ಕೃತ್ಯವಿದಾಗಿದ್ದು ಇವರುಗಳು ಪರೀಕ್ಷೆಗೆ ಅರ್ಜಿ ಸಲ್ಲಿಸುವಾಗಲೇ ಪರೀಕ್ಷೆಯಲ್ಲಿ ದುರಾಚಾರ ನಡೆಸಲು ತಕ್ಕ ಪೂರ್ವ ಸಿದ್ಧತೆಗಳನ್ನು ಮಾಡಿಕೊಂಡು ಅದರಂತೆ ಪರೀಕ್ಷಾ ಕೊಠಡಿಯಲ್ಲಿ ಅಕ್ಕಪಕ್ಕದಲ್ಲಿ ಕುಳಿತುಕೊಂಡು ಉತ್ತರಪತ್ರಿಕೆಗಳನ್ನು ಪರಸ್ಪರ ಅದಲು ಬದಲು ಮಾಡಿಕೊಂಡು ಉತ್ತರ ಬರೆಯುವ ಮೂಲಕ ತೀವ್ರ ಗುರುತರವಾದ ಪರೀಕ್ಷಾ ಅವ್ಯವಹಾರವನ್ನು ಮಾಡಿರುವುದು ಕಂಡುಬಂದಿರುತ್ತದೆ.

ಆದಕಾರಣ, ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ:21–07–2003ರ ತಿಳುವಳಿಕೆ ಪತ್ರದಲ್ಲಿ ಇವರುಗಳಿಂದಾದ ಈ ಅಪರಾಧಕ್ಕಾಗಿ 1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಾವಳಿಗಳ ನಿಯಮ 14ರನ್ವಯ ಇವರುಗಳನ್ನು ಕ್ರಿಮಿನಲ್ ಪ್ರಾಸಿಕ್ಯೂಷನ್‌ಗೆ ಹೊಣೆ ಮಾಡುವುದರ ಜೊತೆಗೆ ಕೆಳಕಂಡ ದಂಡನೆಯುನ್ನು ಏಕೆ ವಿಧಿಸಬಾರದೆಂಬುದಕ್ಕೆ ಅವರುಗಳಿಂದ ಸಮಾಜಾಯಿಷಿಯನ್ನು ಕೇಳಲಾಗಿತ್ತು.

(1) ಪ್ರಸ್ತುತ ಅಧಿವೇಶನದ ಇಲಾಖಾ ಪರೀಕ್ಷೆಯ ಇವರಿಬ್ಬರ ಅಭ್ಯರ್ಥಿತ್ವವನ್ನು ರದ್ದು ಪಡಿಸುವುದೇ ಅಲ್ಲದೇ ಇವರಿಬ್ಬರೂ ಆಯೋಗದ ವತಿಯಿಂದ ನಡೆಸಲ್ಪಡುವ ಯಾವುದೇ ಪರೀಕ್ಷೆಗೆ ಹಾಜರಾಗದಂತೆ ಶಾಶ್ವತವಾಗಿ ಡಿಬಾರ್ ಮಾಡುವುದು;

(2) ನೋಂದಣಿ ಸಂಖ್ಯೆ:77639ರ ಅಭ್ಯರ್ಥಿಯ ಜನರಲ್ ಲಾ ಭಾಗ–2ರ ಪ್ರಮಾಣ ಪತ್ರವನ್ನು ಹಿಂದಕ್ಕೆ ಪಡೆಯುವುದು ಮತ್ತು ಒಂದು ವೇಳೆ ಈಗಾಗಲೇ ಅದರ ಆಧಾರದಿಂದ ಸೌಲಭ್ಯಗಳನ್ನೇನಾದರೂ ಪಡೆದಿದ್ದಲ್ಲಿ ಅದನ್ನು ರದ್ದುಗೊಳಿಸುವಂತೆ ಅವರ ಇಲಾಖಾ ಮುಖ್ಯಸ್ಥರಿಗೆ ತಿಳಿಸುವುದು; ಹಾಗೂ

(3) ಈ ಅಭ್ಯರ್ಥಿಗಳ ಇಲಾಖಾ ಮುಖ್ಯಸ್ಥರುಗಳಿಗೆ ಇವರುಗಳಿಂದಾದ ಈ ಗುರುತರ ಅಪರಾಧವನ್ನು ತಿಳಿಸಿ ಅವರ ವಿರುದ್ಧ ಸೂಕ್ತ ಕ್ರಮ ಜರುಗಿಸುವಂತೆ ಶಿಫಾರಸ್ಸು ಮಾಡುವುದು.

ಸದರಿ ತಿಳುವಳಿಕೆ ಪತ್ರಕ್ಕೆ ಉತ್ತರವಾಗಿ ಶ್ರೀ ಬಾಬುಸಾಬ್ ಅವರು ಉಲ್ಲೇಖ(3)ರಲ್ಲಿ ಓದಲಾದ ದಿನಾಂಕ:28–07–2003ರ, ಲಿಖಿತ ಹೇಳಿಕೆಯಲ್ಲಿ ತಮ್ಮ ತಪ್ಪನ್ನು ಒಪ್ಪಿಕೊಂಡು ತಿಳಿಯದೇ ಮಾಡಿದ ಈ ತಪ್ಪಿಗಾಗಿ ಕ್ಷಮೆ ಯಾಚಿಸಿ ಅವರಿಗೆ ಕಳುಹಿಸಲಾಗಿದ್ದ ಪ್ರಮಾಣ ಪತ್ರವನ್ನು ವಾಪಸ್ಸು ಕಳುಹಿಸಿರುತ್ತಾರೆ ಹಾಗೂ ಇನ್ನು ಮುಂದೆ ಈ ರೀತಿಯ ತಪ್ಪನ್ನು ಮಾಡುವುದಿಲ್ಲವೆಂದೂ ಹಾಗೂ ಇನ್ನು ಮುಂದೆ ಆಯೋಗದಿಂದ ನಡೆಸಲಾಗುವ ಯಾವುದೇ ಪರೀಕ್ಷೆಯನ್ನು ತೆಗೆದುಕೊಳ್ಳುವುದಿಲ್ಲವೆಂದೂ ತಿಳಿಸಿರುತ್ತಾರೆ.

ಆದರೆ, ಮತ್ತೊಬ್ಬ ಆಪಾದಿತರಾದ ಶ್ರೀ ಕೆ.ರಾಜಣ್ಣ, ಟೀಚರ್, ಸರ್ಕಾರಿ ಪದವಿ ಪೂರ್ವ ಕಾಲೇಜು, ಕುಣಿಗಲ್ ಇವರಿಗೆ ಜಾರಿ ಮಾಡಲಾಗಿದ್ದ ತಿಳುವಳಿಕೆ ಪತ್ರವನ್ನು ಅವರು ದಿನಾಂಕ:25-07-2003ರಂದು ಸ್ವೀಕರಿಸಿರುವ ಬಗ್ಗೆ ಅಂಚೆ ಇಲಾಖೆಯಿಂದ ಸ್ವೀಕೃತಿ ಬಂದಿದ್ದು ಇದುವರೆಗೂ ಅವರಿಂದ ಅದಕ್ಕೆ ಯಾವುದೇ ಉತ್ತರ ಬಂದಿರುವುದಿಲ್ಲ. ಹೀಗಾಗಿ ಅವರು ಪರೋಕ್ಷವಾಗಿ ತಮ್ಮ ತಪ್ಪನ್ನು ಒಪ್ಪಿಕೊಂಡಂತಾಗಿರುತ್ತದೆ.

ಆಯೋಗವು ಈ ಪ್ರಕರಣವನ್ನು ಅಭ್ಯರ್ಥಿಗಳ ತಪ್ಪೊಪ್ಪಿಗೆ ಹೇಳಿಕೆ ಹಾಗೂ ಸಂಬಂಧಿತ ದಾಖಲೆಗಳ ಹಿನ್ನೆಲೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಅಪಾದಿತ ಅಭ್ಯರ್ಥಿಗಳ ವಿರುದ್ಧ ಮಾಡಲಾದ ಆರೋಪವು ನಿಸ್ಸಂದಿಗ್ಧವಾಗಿ ಸಾಬೀತಾಗಿರುವುದರಿಂದ 1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಡೆಸುವಿಕೆ) ನಿಯಮಾವಳಿಗಳ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ದಿನಾಂಕ: 14-07-1993ರ ಆಯೋಗದ ಅಧಿಕೃತಜ್ಞಾಪನದನ್ವಯ ಅವರುಗಳಿಗೆ ಉಲ್ಲೇಖಿತ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಅದರಂತೆ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1) 1016/2003-04/ಪಿಎಸ್‌ಸಿ, ದಿನಾಂಕ: 11ನೇ ನವೆಂಬರ್ 2003**

1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಡೆಸುವಿಕೆ) ನಿಯಮಾವಳಿಗಳ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ದಿನಾಂಕ: 14-07-1993ರ ಆಯೋಗದ ಅಧಿಕೃತಜ್ಞಾಪನ ಸಂಖ್ಯೆ: ಆಡಳಿತ. 398/93-94/ಪಿಎಸ್‌ಸಿ ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಆಪಾದಿತ ಅಭ್ಯರ್ಥಿಗಳಾದ ಶ್ರೀ ಬಾಬುಸಾಬ್, ಅಬಕಾರಿ ಉಪನಿರೀಕ್ಷಕರು, ಕುಣಿಗಲ್ ಉಪವಲಯ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ ಮತ್ತು ಶ್ರೀ ಕೆ.ರಾಜಣ್ಣ, ಶಿಕ್ಷಕರು, ಸರ್ಕಾರಿ ಪದವಿ ಪೂರ್ವ ಕಾಲೇಜು (M G H S)ಕುಣಿಗಲ್-ತುಮಕೂರು ಜಿಲ್ಲೆ, ಅವರುಗಳಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸಿದೆ ಹಾಗೂ ಅವರ ವಿರುದ್ಧ ಕ್ರಮಗಳನ್ನು ತೆಗೆದುಕೊಳ್ಳಲು ನಿರ್ಧರಿಸಲಾಗಿದೆ:

(1) ಪ್ರಸ್ತುತ ಅಧಿವೇಶನದ ಅಂದರೆ 2001ರ ದ್ವಿತೀಯ ಅಧಿವೇಶನದ, ಇಲಾಖಾ ಪರೀಕ್ಷೆಗಳಿಗೆ ಶ್ರೀ ಬಾಬುಸಾಬ್, ಅಬಕಾರಿ ಉಪನಿರೀಕ್ಷಕರು, ಕುಣಿಗಲ್ ಉಪವಲಯ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ ಮತ್ತು ಶ್ರೀ ಕೆ.ರಾಜಣ್ಣ, ಶಿಕ್ಷಕರು, ಸರ್ಕಾರಿ ಪದವಿ ಪೂರ್ವ ಕಾಲೇಜು (M G H S)ಕುಣಿಗಲ್-ತುಮಕೂರು ಜಿಲ್ಲೆ, ಇವರುಗಳ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಆಯೋಗದ ವತಿಯಿಂದ ಮುಂದೆ ನಡೆಸಲ್ಪಡುವ ಯಾವುದೇ ಪರೀಕ್ಷೆಗೆ ಹಾಜರಾಗದಂತೆ ಅವರುಗಳನ್ನು ಶಾಶ್ವತವಾಗಿ ಡಿಬಾರ್ ಮಾಡಿದೆ;

(2) ನೋಂದಣಿ ಸಂಖ್ಯೆ:77639ರ ಅಭ್ಯರ್ಥಿಯಾದ ಶ್ರೀ ಬಾಬುಸಾಬ್ ಅಬಕಾರಿ ಉಪನಿರೀಕ್ಷಕರು, ಕುಣಿಗಲ್ ಉಪವಲಯ, ಕುಣಿಗಲ್ ಇವರಿಗೆ ನೀಡಲಾದ ಜನರಲ್ ಲಾ ಭಾಗ-2ರ ಪ್ರಮಾಣ ಪತ್ರವನ್ನು ಹಿಂದಕ್ಕೆ ಪಡೆಯುವುದು ಮತ್ತು ಅವರು ಒಂದು ವೇಳೆ ಈಗಾಗಲೇ ಅದರ ಆಧಾರದಿಂದ ಸೌಲಭ್ಯಗಳೇನಾದರೂ ಪಡೆದಿದ್ದಲ್ಲಿ ಅದನ್ನು ರದ್ದುಗೊಳಿಸುವಂತೆ ಅವರ ಇಲಾಖಾ ಮುಖ್ಯಸ್ಥರಿಗೆ ತಿಳಿಸುವುದು; ಹಾಗೂ

(3) ಈ ಇಬ್ಬರು ಅಭ್ಯರ್ಥಿಗಳ ಇಲಾಖಾ ಮುಖ್ಯಸ್ಥರುಗಳಿಗೆ ಇವರುಗಳಿಂದಾದ ಈ ಗುರುತರ ಅಪರಾಧವನ್ನು ತಿಳಿಸಿ ಅವರ ವಿರುದ್ಧ ಸೂಕ್ತ ಕ್ರಮ ಜರುಗಿಸುವಂತೆ ಶಿಫಾರಸ್ಸು ಮಾಡುವುದು.

**ಆಯೋಗದ ಆದೇಶದ ಮೇರೆಗೆ,**

ಕಾರ್ಯದರ್ಶಿ ಹಾಗೂ ನಿಯಂತ್ರಕರು,

ಇಲಾಖಾ ಪರೀಕ್ಷೆಗಳು,

ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

ಪಿ.ಆರ್. 736

**ಕಾರ್ಯ ನಿರ್ವಾಹಕ ಇಂಜಿನಿಯರ್‌ರವರ ಕಾರ್ಯಾಲಯ, ಲೋಕೋಪಯೋಗಿ ಇಲಾಖೆ, ಕೋಲಾರ ವಿಭಾಗ, ಕೋಲಾರ**

**ಬಾಬುವಾರು ದರದ ಟೆಂಡರ್ ಮುಂದೂಡಿಕೆ ಪ್ರಕಟಣೆ**

**ಟೆಂಡರ್ ವಿಸ್ತರಣಾ ಅಧಿಸೂಚನಾ ಸಂಖ್ಯೆ:8-1:2003-04, ದಿನಾಂಕ: 20ನೇ ಅಕ್ಟೋಬರ್ 2003**

**ಉಲ್ಲೇಖ:** ಈ ಕಛೇರಿ ಟೆಂಡರ್ ಪ್ರಕಟಣೆ ಸಂಖ್ಯೆ:8:2003-04 ದಿ.30-9-2003.

ಮುಂದಿನ ಉಲ್ಲೇಖದಲ್ಲಿ ತೋರಿಸಿರುವ ಟೆಂಡರ್ ಕಾಮಗಾರಿಯನ್ನು ಈ ಕೆಳಗಿನ ದಿನಾಂಕದಂದು ಮುಂದೂಡಲಾಗಿದೆ.

1. ಟೆಂಡರ್ ಫಾರಂಗಳಿಗಾಗಿ ಮನವಿ ಸ್ವೀಕಾರ ದಿನಾಂಕ:12-11-2003
2. ಖಾಲಿ ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ:14-11-2003 ಸಂಜೆ:5-30 ಗಂಟೆಗೆ
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ದಿನಾಂಕ: 17-11-2003 ರಂದು ಸಂಜೆ 4-00 ಗಂಟೆವರೆಗೆ:

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್‌ಗಿಟ್ಟ ಮೊತ್ತ ರೂ.ಲಕ್ಷಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ | ಕಾಮಗಾರಿಯನ್ನು ಪೂರ್ಣಗೊಳಿಸಲು ಗೊತ್ತುಪಡಿಸಲಾದ ಕಾಲಾವಧಿ ಮಳೆಗಾಲ ಸೇರಿ | ಅರ್ಹ ದರ್ಜೆಯ ಗುತ್ತಿಗೆದಾರರು | ಟೆಂಡರ್ ಫಾರಂ ಬೆಲೆ |
|---|---|---|---|---|---|---|
| 1. | ಕೋಲಾರ ಜಿಲ್ಲೆ ಚಿಂತಾಮಣಿ ಪಟ್ಟಣದಲ್ಲಿ ಕಾಂಪೋಸಿಟ್ ಜೂನಿಯರ್ ಕಾಲೇಜು ಕಟ್ಟಡ ನಿರ್ಮಾಣ (ಉಳಿಕೆ ಕಾಮಗಾರಿ) | 3.49 | 8725-00 | 3 ತಿಂಗಳು | 3ನೇ ದರ್ಜೆ ಮತ್ತು ಮೇಲ್ಪಟ್ಟು | ರೂ.100 + ಇತರೆ ತೆರಿಗೆಗಳು |

ಉಳಿದ ಯಾವುದೇ ನಿಬಂಧನೆಗಳಲ್ಲಿ ಹಾಗೂ ನಿಯಮಾವಳಿಗಳಲ್ಲಿ ಬದಲಾವಣೆ ಇರುವುದಿಲ್ಲ.

**ದೊಡ್ಡಚೌಡಪ್ಪ**

ಪಿ.ಆರ್. 728 ಕಾರ್ಯನಿರ್ವಾಹಕ ಇಂಜಿನಿಯರ್, ಲೋ.ಇ, ಕೋಲಾರ ವಿಭಾಗ, ಕೋಲಾರ.

## ಕರ್ನಾಟಕ ಲೋಕಸೇವಾ ಆಯೋಗ

## ಲೋಕ ಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್", ಬೆಂಗಳೂರು

### ತಿದ್ದುಪಡಿ

### ಸಂಖ್ಯೆ:ಇಪ(2)6494/2003-04/ಪಿಎಸ್‌ಸಿ, ದಿನಾಂಕ: 10ನೇ ನವೆಂಬರ್ 2003

2001ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಎಸ್.ಎ.ಎಸ್. ವಿಷಯದ ಉತ್ತರಪತ್ರಿಕೆಯಲ್ಲಿ ನೀಡಲಾದ ಅಂಕಗಳ ಮರು ಎಣಿಕೆ ಮಾಡುವಂತೆ ಮನವಿಯನ್ನು ಸಲ್ಲಿಸಿದ ಅಭ್ಯರ್ಥಿಗಳ ಕೋರಿಕೆಯನ್ನು ಪರಿಗಣಿಸಿ, ಮರು ಎಣಿಕೆಯ ನಂತರ ಮೂಲ ಅಂಕಗಳಲ್ಲಿ ಕಂಡು ಬಂದ ಬದಲಾವಣೆಗೆ ಅನುಸಾರವಾಗಿ ಕೆಳಕಂಡ ಫಲಿತಾಂಶವನ್ನು ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಇ.ಪ(1)79/2003-04/ಪಿಎಸ್‌ಸಿ ದಿನಾಂಕ:21-05-2003ರಲ್ಲಿ ಪ್ರಕಟಿಸಲಾಗಿರುವ ಫಲಿತಾಂಶವನ್ನು ಮುದ್ರಿತವಾಗಿರುವ ಕರ್ನಾಟಕ ರಾಜ್ಯಪತ್ರ ದಿನಾಂಕ: 05-06-2003ರ ಭಾಗ-5ರಲ್ಲಿ ಸೇರಿಸಿ ಓದಿಕೊಳ್ಳತಕ್ಕದ್ದು.

### ಗುಲ್ಬರ್ಗಾ ವಿಭಾಗ

### ಪರಿಶಿಷ್ಟ - "ಸಿ"

ನೋಂದಣಿ ಸಂಖ್ಯೆ: 64019ರ ಎಸ್.ಎ.ಎಸ್. ಭಾಗ-3ರ ಪತ್ರಿಕೆ-5ರಲ್ಲಿ ವಿನಾಯಿತಿ ಹೊಂದಿರುವರು.

ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು,

ಪಿ.ಆರ್. 729 ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಾರ್ಯಾಲಯ, ಭದ್ರಾವತಿ ಅರಣ್ಯ ವಿಭಾಗ

### ಸಂಕ್ಷಿಪ್ತ ಟೆಂಡರ್-ಕಂ-ಹರಾಜು ಪ್ರಕಟಣೆ

### ಸಂಖ್ಯೆ:ಎಸ್ ಎ ಎಸ್-ಎಂ ಎಫ್‌ಪಿ-ಸಿಆರ್-2/03-04 ದಿನಾಂಕ: 7ನೇ ನವೆಂಬರ್ 2003

**ವಿಷಯ:** 2003-2004ನೇ ಸಾಲಿಗೆ ಕಿರು ಅರಣ್ಯ ಉತ್ಪನ್ನಗಳ ಟೆಂಡರ್-ಕಂ-ಹರಾಜು

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಭದ್ರಾವತಿ ಅರಣ್ಯ ವಿಭಾಗಕ್ಕೆ ಸೇರಿದ ಸರ್ಕಾರಿ ಅರಣ್ಯಗಳು, ಕಾಯ್ದಿಟ್ಟ ಅರಣ್ಯಗಳು, ಕಿರು ಅರಣ್ಯಗಳು, ಹಾಗೂ ಅನುಭೋಗದಲ್ಲಿರುವ ಸರ್ಕಾರದ ಜಮೀನುಗಳಲ್ಲಿನ (ಪಂಚಾಯತ್ ಮತ್ತು ಅಮೃತ ಮಹಲ್ ಕಾವಲ್‌ಗಳನ್ನು ಹೊರತುಪಡಿಸಿ) ಹುಣಸೇ ಫಸಲನ್ನು ದಿನಾಂಕ 15-12-2003 ರಂದು ಈ ಕಛೇರಿ ಆವರಣದಲ್ಲಿ ಸಾಯಂಕಾಲ 4 ಗಂಟೆಗೆ ಕೆಳಸಹಿದಾರರು ಅಥವಾ ಅವರಿಂದ ಅಧಿಕೃತವಾಗಿ ನೇಮಕಗೊಂಡಿರುವ ಅಧಿಕಾರಿಗಳು ಟೆಂಡರ್-ಕಂ-ಹರಾಜು ಮಾಡಲಿರುವರು.

| ಯೂನಿಟ್ ಸಂಖ್ಯೆ | ಅರಣ್ಯ ಉತ್ಪನ್ನದ ವಿವರ | ವಲಯ | ಕಾಲಾವಧಿ | ಮುಂಗಡ ಸಂಚಿತ ಠೇವಣಿ (ರೂ.) |
|---|---|---|---|---|
| 10 | ಹುಣಸೇ ಫಸಲು (ಭದ್ರಾವತಿ ವಲಯದ ಅರಣ್ಯ ಇಲಾಖೆಗೆ ಸೇರಿದ ರಾಜ್ಯ ಹೆದ್ದಾರಿ ಬದಿಯ ಹುಣಸೇ ಮರಗಳು ಬಿ.ಹೆಚ್. ರಸ್ತೆ 45.8 ಕಿ.ಮೀ.ಕಲ್ಲಿನಿಂದ 268.6 ಕಿ.ಮೀ. ವರೆಗೆ ಮತ್ತು ಚಿತ್ರದುರ್ಗ-ಭದ್ರಾವತಿ ರಸ್ತೆಯ 76ನೇ ಕಿಮೀ. ಕಲ್ಲಿನಿಂದ 96ನೇ ಕಿ.ಮೀ ಕಲ್ಲಿನವರೆಗೆ ಸುಮಾರು 141 ಮರಗಳು) | ಭದ್ರಾವತಿ | 2003-2004 (ಒಂದು ವರ್ಷದ ಅವಧಿಗೆ) 30-6-2004ರ ತನಕ | 2000-00 |
| 12 | ಹುಣಸೇ ಮರಗಳು (ತರೀಕೆರೆ ವಲಯ ತರೀಕೆರೆ ಕ್ಕೆ ಒಳಪಟ್ಟ ರಾಷ್ಟ್ರೀಯ ಹೆದ್ದಾರಿ ಬದಿಯಲ್ಲಿರುವ ಹುಣಸೇ ಮರಗಳು ಬಿ.ಹೆಚ್. ರಸ್ತೆಯ 220 ಕಿಮೀ ಕಲ್ಲಿನಿಂದ 246 ಕಿಮೀ ಕಲ್ಲಿನವರೆಗೆ ಮತ್ತು ರಸ್ತೆಯ ಚಿಕ್ಕಮಗಳೂರು ತರೀಕೆರೆ ರಸ್ತೆಯ 46.6 ಕಿಮೀ ಕಲ್ಲಿನಿಂದ 48.6 ಕಿಮೀ ಕಲ್ಲಿನವರೆಗೆ ಸುಮಾರು 112 ಮರಗಳು) | ತರೀಕೆರೆ | " | 2000-00 |

| ಯೂನಿಟ್ ಸಂಖ್ಯೆ | ಅರಣ್ಯ ಉತ್ಪನ್ನದ ವಿವರ | ವಲಯ | ಕಾಲಾವಧಿ | ಮುಂಗಡ ಸಂಚಿತ ಠೇವಣಿ (ರೂ.) |
|---|---|---|---|---|
| 13 | ಹುಣಸೇ ಫಸಲು (ಅಜ್ಜಂಪುರ ವಲಯಕ್ಕೆ ಅಜ್ಜಂಪುರ ಒಳಪಟ್ಟ ರಾಜ್ಯ ಹೆದ್ದಾರಿಯಲ್ಲಿರುವ ಸುಮಾರು 286 ಮರಗಳು) | ಅಜ್ಜಂಪುರ | 2003-2004 (ಒಂದು ವರ್ಷದ ಅವಧಿಗೆ) 30-6-2004ರ ತನಕ | 2000-00 |

**ನಿಬಂಧನೆಗಳು**

1. ಟೆಂಡರ್ ಫಾರಂನ್ನು ರೂ 10-00 ಮತ್ತು ತೆರಿಗೆಗಳನ್ನು ಪಾವತಿ ಮಾಡಿ ಹರಾಜಿನ ದಿನ ಮಧ್ಯಾಹ್ನ 1-00 ಗಂಟೆಯ ಒಳಗಾಗಿ ಈ ಕಛೇರಿಯಲ್ಲಿ ಪಡೆಯಬಹುದಾಗಿದೆ.
2. ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವವರು ಇಎಂಡಿ. ಹಣವನ್ನು ಡಿ.ಡಿ. ಮುಖಾಂತರವಾಗಿಯಾಗಲೀ ನಗದು ರೂಪದಲ್ಲಿಯಾಗಲೀ ಹರಾಜು ಕೂಗುವುದಕ್ಕೆ ಮೊದಲು ಈ ಕಛೇರಿಗೆ ಜಮಾ ಮಾಡಬೇಕು. ಟೆಂಡರ್ ಜೊತೆ ಇಎಂಡಿ. ಇಲ್ಲದಿದ್ದಲ್ಲಿ ಅಂತ ಟೆಂಡರನ್ನು ತಿರಸ್ಕರಿಸಲಾಗುವುದು.
3. ಈ ವಿಭಾಗದಲ್ಲಿ 2003-04ನೇ ಸಾಲಿಗೆ ನೊಂದಾಯಿಸಿದ ಅರಣ್ಯ ಗುತ್ತಿಗೆದಾರರು ಮಾತ್ರ ಈ ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
4. ಸರ್ಕಾರಕ್ಕೆ ಬಾಕಿ ಕಟ್ಟದೇ ಇರುವ ಗುತ್ತಿಗೆದಾರರು ಮತ್ತು ಕಪ್ಪು ಪಟ್ಟಿಯಲ್ಲಿ ಘೋಷಿತ ಅರಣ್ಯ ಗುತ್ತಿಗೆದಾರರು ಈ ಟೆಂಡರ್ ಮತ್ತು ಹರಾಜಿನಲ್ಲಿ ಭಾಗವಹಿಸುವಂತಿಲ್ಲ. ಇದಕ್ಕೆ ತಪ್ಪಿ ಭಾಗವಹಿಸಿದಲ್ಲಿ ಅವರ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
5. ಟೆಂಡರ್ ಕಂ ಹರಾಜಿನ ಗುತ್ತಿಗೆಗೆ ಸಂಬಂಧಿಸಿದಂತೆ ಬಿಡ್ ಮೊಬಲಗನ್ನು ಟೆಂಡರ್ ಕಂ ಹರಾಜು ಮುಗಿದ ನಂತರ ಆ ದಿನವೇ ಜಯಶೀಲರಾದ ಟೆಂಡರ್ ಜಾರಿಯ ಬಿಡ್‌ದಾರರು ಅರ್ಧ ಭಾಗ ಬಿಡ್ ಟೆಂಡರ್ ಹಣ ಮತ್ತು ಚಾಲ್ತಿಯಲ್ಲಿರುವ ಪೂರ್ಣ ತೆರಿಗೆಗಳನ್ನು ಹರಾಜು ಮುಗಿದ ಕೂಡಲೇ ಜಮಾ ಮಾಡತಕ್ಕದ್ದು.
6. ಇತರೆ ಹೆಚ್ಚಿನ ವಿವರಗಳಿಗಾಗಿ ಈ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದು.

ಪಿ.ಆರ್. 730 ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ಅರಣ್ಯ ವಿಭಾಗ

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕ ಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್", ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ:ಇಪ(1)1017/2003-04/ಪಿಎಸ್‌ಸಿ, ದಿನಾಂಕ: 11ನೇ ನವೆಂಬರ್ 2003**

ದಿನಾಂಕ 22-07-1999ರ ಕರ್ನಾಟಕ ರಾಜ್ಯಪತ್ರದ ಭಾಗ-7ರಲ್ಲಿ ಪ್ರಕಟಿಸಲಾಗಿರುವ 1998ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶದಲ್ಲಿ 'ಗುಲ್ಬರ್ಗಾ' ಕೇಂದ್ರ ಶೀರ್ಷಿಕೆ ಕೆಳಗೆ ಅಪೆಂಡಿಕ್ಸ್-'ಬಿ'ಯ ಅಡಿಯಲ್ಲಿ ಎಸ್.ಎ.ಎಸ್. ಭಾಗ-III ಕ್ಕೆ ಸಂಬಂಧಿಸಿದಂತೆ ನೋಂದಣಿ ಸಂಖ್ಯೆ: 39594 ಮತ್ತು 39681ರ ನಡುವೆ ನೋಂದಣಿ ಸಂಖ್ಯೆ 39642 ಅನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

**ಬಿ.ಎ. ಹರೀಶ್‌ಗೌಡ**

ಪಿ.ಆರ್. 731 ಕಾರ್ಯದರ್ಶಿ ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು

ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ಪಶುಪಾಲನೆ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು**

**ಪಶುವೈದ್ಯಕೀಯ ಪರೀಕ್ಷಕರ ಬ್ಯಾಕ್‌ಲಾಗ್ ಹುದ್ದೆಗೆ ಆಯ್ಕೆಯಾದ 18 ಜನ ಅಭ್ಯರ್ಥಿಗಳ ಹೆಚ್ಚುವರಿ ಪಟ್ಟಿ**

**ಉಲ್ಲೇಖ: ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 1ನೇ ಜೂನ್ 2003**

| ಕ್ರ. ಸಂ. | ಹೆಸರು ಮತ್ತು ವಿಳಾಸ | ಶೇಕಡಾ ವಾರು ಅಂಕ | ಹುಟ್ಟಿದ ದಿನಾಂಕ | ವರ್ಗ | ಗುಂಪು |
|---|---|---|---|---|---|
| 1. | ರಾಜ್‌ಕುಮಾರ್ ಆರ್ ಕಟ್ಟಿ ಬಿನ್ ರೇವಣ್ಣಸಿದ್ದಪ್ಪ ನಂ. ಎಲ್ ಐ ಜಿ 119, ಜಲಾನಗರ, ಬಿಜಾಪುರ-586101 | 51.33 | 19-7-70 | ಸಾ ಅ | 29:40 |
| 2. | ಎಂ ಮಂಜುನಾಥ್ ಬಿನ್ ಟಿ ಮುನಿಯಪ್ಪ ನಂ. 4320, ಮುತ್ಯಾಲಪೇಟೆ, ಮುಳಬಾಗಿಲು ತಾ, ಕೋಲಾರ ಜಿಲ್ಲೆ-563131 | 46.33 | 14-11-70 | ಗ್ರಾ ಅ | 29:40 |

| ಕ್ರ. ಸಂ. | ಹೆಸರು ಮತ್ತು ವಿಳಾಸ | ಶೇಕಡಾ ವಾರು ಅಂಕ | ಹುಟ್ಟಿದ ದಿನಾಂಕ | ವರ್ಗ | ಗುಂಪು |
|---|---|---|---|---|---|
| 3. | ಎನ್ ಮಮತ ಬಿನ್ ನಾರಾಯಣಪ್ಪ<br>ನಂ. 166, 7ನೇ ಡಿ ಮೇನ್, 4ನೇ ಹಂತ,<br>3ನೇ ಡಿವಿಷನ್, ಬಸವೇಶ್ವರನಗರ, ಬೆಂಗಳೂರು-79 | 63.50 | 3-6-79 | ಮ ಅ | 18:28 |
| 4. | ಇ. ಪ್ರೇಮ ಬಿನ್ ಈರಚಿಕ್ಕಯ್ಯ ಎನ್<br>ನಂ. 531, ಶ್ರೀ ಸಿದ್ಧಾರ್ಥನಗರ, ಕುಣಿಗಲ್ ಟೌನ್,<br>ಕುಣಿಗಲ್ ತಾ, ತುಮಕೂರು ಜಿಲ್ಲೆ-572130 | 62.67 | 10-1-80 | ಮ ಅ | 18:28 |
| 5. | ಜಿ. ಪದ್ಮಾವತಿ ಬಿನ್ ಎಂ ಗಂಗಯ್ಯ<br>ನಂ. 28, ಕೆ ಹೆಚ್ ಬಿ ಕಾಲೋನಿ, ಕೀಲುಕೋಟೆ<br>ಎಕ್ಸ್‌ಟೆನ್‌ಷನ್, ಕೆಎಸ್‌ಆರ್‌ಟಿಸಿ ಬಸ್ ನಿಲ್ದಾಣದ<br>ಹತ್ತಿರ, ಕೋಲಾರ-563101 | 55.5 | 20-8-75 | ಮ ಅ | 18:28 |
| 6. | ಸುನಿತ ಕುಮಾರಿ ಎನ್ ಬಿನ್ ಎಂ ನಾರಾಯಣಪ್ಪ<br>ನಂ. 86, 1ನೇ ಮೈನ್, 5ನೇ ಕ್ರಾಸ್, ಮೋತಿನಗರ, ಬೆಂಗಳೂರು-32 | 49.83 | 1-5-76 | ಮ ಅ | 18:28 |
| 7. | ಕೆ.ಆರ್. ರಾಜೇಂದ್ರಕುಮಾರ್ ಬಿನ್ ಕೆ.ಎಸ್. ರಾಮಯ್ಯ<br>ನಂ. ಎ/228, 2ನೇ ಸೆಕ್ಟರ್, ಹೆಚ್ ಎಂ ಟಿ ಕ್ವಾಟ್ರಸ್,<br>ಜಾಲಹಳ್ಳಿ, ಬೆಂಗಳೂರು-560031. | 49.50 | 19-6-68 | ಸಾ ಅ | 29.40 |
| 8. | ಅರವಿಂದ ಜೈನಪೂರ್ಣ ಬಿನ್ ಮಲ್ಲಪ್ಪ, ಗಂಗ್ ಚಾವಡಿ,<br>ನಂ. 59, ಬಾಬಾ ಸಾಹೆಬ್ ಹಾಸ್ಟೆಲ್ ಹತ್ತಿರ, ಬಿಜಾಪುರ-586101 | 49.17 | 28-8-71 | ಸಾ ಅ | 29:40 |
| 9. | ಶೈಲಜಾ ಎಸ್ ಬಿನ್ ಸೂರ್ಯಾನಾಯಕ್<br>ನಂ. 7ಡಿ/8, ಹೆಚ್ ಎಂ ಟಿ ವಾಚ್ ಫ್ಯಾಕ್ಟರಿ ಕಾಲೋನಿ,<br>ಜಾಲಹಳ್ಳಿ, ಬೆಂಗಳೂರು-31 | 47.83 | 7-9-81 | ಮ ಅ | 18:28 |
| 10. | ಕೆ.ಸಿ. ಪ್ರಕಾಶ್ ಬಿನ್ ಚಿಕ್ಕರಾಮಯ್ಯ<br>ಕೊಡಗೇಹಳ್ಳಿ ಪೋಸ್ಟ್, ತುರುವೇಕೆರೆ ತಾ, ತುಮಕೂರು ಜಿಲ್ಲೆ | 47.33 | 22-7-72 | ಸಾ ಅ | 29:40 |
| 11. | ಎಂ ಕೆ ಸುರೇಶ್ ಬಿನ್ ಲೇಟ್ ಎಂ ಎಸ್ ಕಾಳೀರಯ್ಯ<br>2ನೇ ಕ್ರಾಸ್, ಸಿದ್ಧಾರ್ಥನಗರ, ಮಳವಳ್ಳಿ, ಮಂಡ್ಯ ಜಿಲ್ಲೆ-571430 | 47.17 | 18-7-64 | ಸಾ ಅ | 29:40 |
| 12. | ಆರ್ ವೆಂಕಟೇಶ್ ಬಿನ್ ರಾಮಪ್ಪ<br>ಹೆಚ್‌ಬಿಜಿ ಹಳ್ಳಿ, ಟಿ. ನುಳೇನೂರ್ ಪೋಸ್ಟ್, ಹೊಳಲ್ಕೆರೆ ತಾ,<br>ಚಿತ್ರದುರ್ಗ ಜಿಲ್ಲೆ | 46.67 | 23-6-70 | ಸಾ ಅ | 29:40 |
| 13. | ಆರ್ ಜಯಣ್ಣ ಬಿನ್ ರಂಗಯ್ಯ<br>ನಂ. 4260, 4ನೇ ಕ್ರಾಸ್, ಗಾಂಧಿನಗರ, ಮೈಸೂರು-570007 | 45.83 | 1-7-71 | ಸಾ ಅ | 29:40 |
| 14. | ಎಲ್ ಸಣ್ಣರಾಮನಾಯಕ ಬಿನ್ ಲೋಕ್ಯಾನಾಯಕ,<br>ಕೆಪಿಟಿಸಿಎಲ್, ಕುಂಬಳಗೋಡು, ಮೈಸೂರು ರಸ್ತೆ, ಬೆಂಗಳೂರು-74 | 45.83 | 8-8-67 | ಗ್ರಾ ಅ | 29:40 |
| 15. | ಮಾರೆಪ್ಪ ಮಾದರ್ ಬಿನ್ ಬಾಳಪ್ಪ<br>ಬೀರಳದಿನ್ನಿ ಪೋಸ್ಟ್, ಬಿ ಬಾಗೇವಾಡಿ ತಾ. ಬಿಜಾಪುರ ಜಿಲ್ಲೆ-586216 | 45.00 | 1-6-70 | ಗ್ರಾ ಅ | 29:40 |
| 16 | ರಾಚಯ್ಯ ಬಿನ್ ನಂಜಯ್ಯ<br>ಮಾದಾಪುರ, ಟಿ ನರಸೀಪುರ ತಾ. ಮೈಸೂರು ಜಿಲ್ಲೆ | 44.83 | 20-7-71 | ಗ್ರಾ ಅ | 29:40 |
| 17 | ರುದ್ರಯ್ಯ ಬಿನ್ ಗಂಡೇಮಾದಯ್ಯ<br>ಯಕ್ಕೆರಗ್ರಾಮ ಅಂಚೆ, ಮಳವಳ್ಳಿ ತಾ. ಮಂಡ್ಯ ಜಿಲ್ಲೆ-571424 | 44.5 | 1-6-69 | ಗ್ರಾ ಅ | 29:40 |
| 18. | ಜಯಲಕ್ಷ್ಮೀ ಕೆ ವಿ ಬಿನ್ ವೀರಯ್ಯ ಎಸ್<br>ನಂ. 357, 20ನೇ ಮೈನ್, 2ನೇ ಸ್ಟೇಜ್, ಜೆ.ಪಿ. ನಗರ,<br>ಮೈಸೂರು-570008 | 43.00 | 2-7-74 | ಮ ಅ | 18:28 |

ನಿರ್ದೇಶಕರು,

ಪಿ.ಆರ್. 739

ಪಶುಪಾಲನಾ ಇಲಾಖೆ, ಬೆಂಗಳೂರು

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಟೆಂಡರ್ ಪ್ರಕಟಣೆ

**ಸಂಖ್ಯೆ: ಸಿಆಸುಇ 45 ಡಿಟಿಎಂ 2003, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2003**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ವಿವಿಧ ಕಛೇರಿಗಳಲ್ಲಿ ಈ ಕೆಳಕಂಡ ಕಂಪನಿಯ ಡಿಜಿಟಲ್ ಪ್ರಿಂಟರ್, ಡಿಜಿಟಲ್ ಕಾಪಿಯರ್‌ಗಳಿದ್ದು ಇವುಗಳ ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣೆಯನ್ನು (Comprehensive) ಅಧಿಕೃತ ಸೇವಾದಾರರಿಗೆ (Authorised service provider) ವಹಿಸಲು ಸರ್ಕಾರವು ಉದ್ದೇಶಿಸಿದೆ. ಆದ್ದರಿಂದ ಈ ಬಗ್ಗೆ ಅಧಿಕೃತ ಸೇವಾದಾರರಿಂದ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಿದೆ. ಅಧಿಕೃತ ಸೇವಾದಾರರ ಬಗ್ಗೆ ದೃಢೀಕರಣ ಪತ್ರವನ್ನು ಟೆಂಡರ್‌ನೊಂದಿಗೆ ಲಗತ್ತಿಸಿರಬೇಕು.

| ಕ್ರ. ಸಂ. | ಇಲಾಖೆ | ಕಂಪನಿ | ಮಾದರಿ |
|---|---|---|---|
| | **ಡಿಜಿಟಲ್ ಪ್ರಿಂಟರ್:** | | |
| 1. | ಲೋಕೋಪಯೋಗಿ ಇಲಾಖೆ (ಸ್ವೀಮರ) | ಹೆಚ್‌ಸಿಎಲ್ | ಡಿಪಿ 21ಎಸ್ |
| 2. | ಶಿಕ್ಷಣ ಇಲಾಖೆ (ಸ್ವೀಮರ) | ಹೆಚ್‌ಸಿಎಲ್ | ಡಿಪಿ 2030 |
| 3. | ಶಿಕ್ಷಣ ಇಲಾಖೆ (ಸ್ವೀಮರ) | ಗೆಸ್ಟನರ್ | 5327 |
| 4. | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ | ಹೆಚ್‌ಸಿಎಲ್ | ಡಿಪಿ 2030 |
| 5. | ಸಚಿವ ಸಂಪುಟ ಶಾಖೆ | ಗೆಸ್ಟನರ್ | ಡಿಪಿ 5327 |
| 6. | ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸ್ವೀಮರ) | ಗೆಸ್ಟನರ್ | 5308 bs |
| 7. | ಕಂದಾಯ ಇಲಾಖೆ (ಸ್ವೀಮರ) | ರಿಸೋ | ಟಿಆರ್ 1530 |
| 8. | ವಸತಿ ಇಲಾಖೆ (ಸ್ವೀಮರ) | ರಿಸೋ | ಜಿಆರ್ 1750 |
| 9. | ಕೃಷಿ ಮತ್ತು ತೋಟಗಾರಿಕೆ ಇಲಾಖೆ (ಸ್ವೀಮರ) | ಹೆಚ್‌ಸಿಎಲ್ | ಡಿಪಿ 31 s |
| | **ಡಿಜಿಟಲ್ ಕಾಪಿಯರ್:** | | |
| 10. | ಪ್ರಧಾನ ಕಾರ್ಯದರ್ಶಿಯವರ ಕಛೇರಿ ಲೋಕೋಪಯೋಗಿ ಇಲಾಖೆ | ಹೆಚ್‌ಸಿಎಲ್ | ಡಿಪಿ 2570 |
| 11. | ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ | ಹೆಚ್‌ಸಿಎಲ್ | ಡಿಪಿ 3580 |
| 12. | ಕಂದಾಯ ಸುಧಾರಣಾ ಆಯೋಗ | ಹೆಚ್‌ಸಿಎಲ್ | ಡಿಪಿ 2570 |

**ಟೆಂಡರ್‌ಗಳ ಷರತ್ತುಗಳು ಈ ಕೆಳಕಂಡಂತಿವೆ:**

1. ಮೊಹರಾದ ಟೆಂಡರ್‌ಗಳ ಲಕೋಟೆಯ ಮೇಲೆ "ಡಿಜಿಟಲ್ ಪ್ರಿಂಟರ್: ಕಾಪಿಯರ್‌ಗಳ ವಾರ್ಷಿಕ ಸೇವಾ ನಿರ್ವಹಣೆ ದರಪಟ್ಟಿ" ಎಂದು ಬರೆಯತಕ್ಕದ್ದು.
2. ದರಪಟ್ಟಿಯನ್ನು ನೀಡುವ ಸಂಸ್ಥೆಗಳು ಈ ಮೇಲ್ಕಂಡ ಯಂತ್ರಗಳ ದುರಸ್ಥಿಗೆ ಬೇಕಾಗುವ ಬಿಡಿ ಭಾಗಗಳ ದಾಸ್ತಾನಿನ ಬಗ್ಗೆ ಮಾಹಿತಿ ನೀಡಬೇಕು.
3. ಪ್ರತಿ ಯಂತ್ರಕ್ಕೂ ಪ್ರತ್ಯೇಕ ವಾರ್ಷಿಕ ಸೇವಾ ನಿರ್ವಹಣೆ ದರ ಸೂಚಿಸಬೇಕು. (Comprehensive) ಹಾಗೂ ಸೂಚಿಸಿದ ದರಕ್ಕೆ ತೆರಿಗೆಗಳಿದ್ದಲ್ಲಿ ಪ್ರತ್ಯೇಕ ನಮೂದಿಸಬೇಕು.
4. ವಾರ್ಷಿಕ ಸೇವಾ ನಿರ್ವಹಣೆ ವೆಚ್ಚದಿಂದ ಚಾಲ್ತಿಯಲ್ಲಿರುವ ಮಾರಾಟ ತೆರಿಗೆ ಮತ್ತು ಸೇವಾ ತೆರಿಗೆ (ಆದಾಯ ತೆರಿಗೆ) ಯನ್ನು ಬಿಲ್ಲು ಮೊತ್ತದಿಂದ ಕಡಿತಗೊಳಿಸಿ ಸರ್ಕಾರ ನೇರವಾಗಿ ಪಾವತಿಸುವುದು.
5. ಸೂಚಿಸಿದ ದರವು ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷಕ್ಕೆ ಚಾಲ್ತಿಯಲ್ಲಿರತಕ್ಕದ್ದು. ಕ್ರಮ ಸಂಖ್ಯೆ 9, 11 ಮತ್ತು 12 ರಲ್ಲಿರುವ ಯಂತ್ರಗಳು ಕ್ರಮವಾಗಿ ದಿನಾಂಕ: 8-5-2004, 25-5-2004 ಮತ್ತು 25-5-2003 ಮುಗಿದ ನಂತರ ವಾ.ಸೇ.ನಿ. ಗೆ ವಹಿಸಲಾಗುವುದು.
6. ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಿದಲ್ಲಿ ದೂರು ಬಂದಾಗ ದುರಸ್ಥಿ ಪಡಿಸುವುದಲ್ಲದೆ, ಕನಿಷ್ಟ ತಿಂಗಳಿಗೊಮ್ಮೆ ತಂತ್ರಜ್ಞರಿಂದ ನಿರೋಧಾತ್ಮಕ ನಿರ್ವಹಣೆ (Preventive Maintenance) ಮಾಡಿಸತಕ್ಕದ್ದು. ತೃಪ್ತಿಕರವಾಗಿ ಸರ್ವೀಸ್ ಮಾಡಿದ ಬಗ್ಗೆ ದೃಢೀಕರಣ ಆಧಾರದ ಮೇಲೆ ಪ್ರತಿ 3 ತಿಂಗಳಿಗೊಮ್ಮೆ 4 ಕಂತುಗಳಲ್ಲಿ ಸೇವಾ ಹಣವನ್ನು ಸಂದಾಯ ಮಾಡಲಾಗುವುದು.
7. ದರಪಟ್ಟಿಯೊಂದಿಗೆ ಠೇವಣಿ (ಇ.ಎಂ.ಡಿ) ಹಣ ರೂ.10,000-00 ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿ.ಆ.ಸು.ಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು-560 001 ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು. ರೂ.10,000-00 ಗಳ ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
8. ಯಶಸ್ವಿ ಟೆಂಡರ್‌ದಾರರ ಇ ಎಂ ಡಿ ಮೊತ್ತವನ್ನು ಸರ್ವೀಸ್ ಮುಗಿದ ನಂತರ ಅವರ ಕಾರ್ಯನಿರ್ವಹಣೆ ಬಗ್ಗೆ ಯಾವುದೇ ದೂರು ಇಲ್ಲದಿದ್ದಲ್ಲಿ ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಸ್ಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.

9. ಅಯಶಸ್ಸು ಟೆಂಡರ್‌ದಾರರು ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
10. ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 12-12-2003 ರಂದು ಮಧ್ಯಾಹ್ನ 3.30 ಗಂಟೆಯೊಳಗೆ ಸಿ.ಆ.ಸು.ಇ. (ಕಾರ್ಯಕಾರಿ) ಕೊಠಡಿ ಸಂಖ್ಯೆ: 23, ನೆಲ ಮಹಡಿ, ವಿಧಾನಸೌಧ, ಬೆಂಗಳೂರು-560 001 ಈ ಕಛೇರಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
11. ಮೇಲಿನ ಅಂಶಗಳ ಬಗ್ಗೆ ಪೂರ್ಣ ವಿವರ ನೀಡತಕ್ಕದ್ದು. ಅಪೂರ್ಣ ವಿವರ ಇರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
12. ಯಾವುದೇ ಕಾರಣವನ್ನು ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.
13. ಟೆಂಡರ್‌ಗಳನ್ನು ಟೆಂಡರ್ ಬುಲೆಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ:23, ವಿಧಾನಸೌಧ, ಬೆಂಗಳೂರು ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 15-12-2003 ಮಧ್ಯಾಹ್ನ 4.30 ಗಂಟೆಗೆ ತೆರೆಯಲಾಗುವುದು.

**ಹೆಚ್.ಕೆ. ರವಿಮೂರ್ತಿ**

ಪಿ.ಆರ್. 744

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಟೆಂಡರ್ ಪ್ರಕಟಣೆ

**ಸಂಖ್ಯೆ: ಸಿಆಸುಇ 103 ಡಿಟಿಎನ್ 2003, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2003**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಚಿವರುಗಳ ಅಧಿಕೃತ ನಿವಾಸ/ಕಚೇರಿಗಳಲ್ಲಿರುವ ಈ ಕೆಳಕಂಡ ಮಾದರಿಯ ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣೆಗೆ ಒಳಪಡಿಸಲು ಸರ್ಕಾರವು ಉದ್ದೇಶಿಸಿದೆ. ಈ ಸಂಬಂಧ ಪ್ರಸಿದ್ಧ ಸಂಸ್ಥೆಗಳಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ವಾರ್ಷಿಕ ಸೇವಾ ನಿರ್ವಹಣಾ ಅವಧಿಯು ಆದೇಶ ಹೊರಡಿಸುವ ದಿನಾಂಕದಿಂದ ಒಂದು ವರ್ಷಕ್ಕೆ ಇರುತ್ತದೆ.

| ಕ್ರ. ಸಂ. | ಮಾದರಿ | ಒಟ್ಟು ಎಕ್ಸ್‌ಟೆನ್‌ಷನ್‌ಗಳು | ಒಟ್ಟು ಸಂಪರ್ಕ ವ್ಯವಸ್ಥೆ ಸಂಖ್ಯೆ |
|---|---|---|---|
| 01 | ನಿಟ್‌ಸುಕೋ ಎನ್‌ಕೇ ಐಎಸ್‌ಡಿಎನ್ ನೈಸ್ 321 ಸೀರಿಸ್ ಡಿಜಿಟಲ್ ಕೀ ಟೆಲಿಫೋನ್ ಸಿಸ್ಟಂ | 24 ಲೈನ್ಸ್ | 2 Nos. |
| 02 | ಮೆಲ್ಟ್ರಾನ್ 3/8 ಮಾದರಿಯ ಕೀ ಟೆಲಿಫೋನ್ | 8 ಲೈನ್ಸ್ | 3 Nos. |
| 03 | ಪ್ಯಾನಾಸೋನಿಕ್ ಕೆಎಕ್ಸ್ ಟಿಎ:308 ಬಿಎಕ್ಸ್ ಮಾದರಿ | 4 ಲೈನ್ಸ್ /3 P&T lines | 12 Nos. |
| 04 | ಪ್ಯಾನಾಸೋನಿಕ್ ಡಿಜಿಟಲ್ ಮಾದರಿ ಸಂಖ್ಯೆ: ಕೆಎಕ್ಸ್ ಟಿಡಿ 816 | 6/16 ಲೈನ್ಸ್ | 1 No. |
| 05 | ಪ್ಯಾನಾಸೋನಿಕ್ ಕೆಎಕ್ಸ್ ಟಿಎ 308 ಬಿಎಕ್ಸ್ | 6/16 ಲೈನ್ಸ್ | 1 No. |
| 06 | ಇಪಿಎಬಿಎಕ್ಸ್ ಉಪಕರಣ (ಕಿಯೋನಿಕ್ಸ್) | 3/6 ಲೈನ್ಸ್ | 1 No. |
| 07 | ಆಪ್ಟಿಮಾ ಬೇಸಿಕ್ 2/6 (ಇಪಿಎಬಿಎಕ್ಸ್) | 4 ಲೈನ್ಸ್ | 4 Nos. |

**ಟೆಂಡರ್‌ನ ಷರತ್ತುಗಳು ಈ ಕೆಳಕಂಡಂತಿವೆ:-**

1) ಮೊಹರು ಮಾಡಿರುವ ಟೆಂಡರ್‌ಗಳ ಲಕೋಟೆಯ ಮೇಲೆ "ಕೀ ಟೆಲಿಫೋನ್ ಉಪಕರಣಗಳ ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣೆ ದರಪಟ್ಟಿ" ಎಂದು ಬರೆಯತಕ್ಕದ್ದು.

2) ವಾರ್ಷಿಕ ಸೇವಾ ನಿರ್ವಹಣೆ ವೆಚ್ಚದಿಂದ ಚಾಲ್ತಿಯಲ್ಲಿರುವ ಮಾರಾಟ ತೆರಿಗೆ ಮತ್ತು ಸೇವಾ ತೆರಿಗೆ (ಆದಾಯ ತೆರಿಗೆ) ಯನ್ನು ಬಿಲ್ಲು ಮೊತ್ತದಿಂದ ಕಡಿತಗೊಳಿಸಿ ಸರ್ಕಾರ ನೇರವಾಗಿ ಪಾವತಿಸುವುದು.

3) ದರಪಟ್ಟಿ ನೀಡುವ ಸಂಸ್ಥೆಗಳು ಈ ಮೇಲ್ಕಂಡ ಉಪಕರಣಗಳ ದುರಸ್ಥಿಗೆ ಬೇಕಾಗುವ ಬಿಡಿ ಭಾಗಗಳ ದಾಸ್ತಾನಿನ ಬಗ್ಗೆ ಮಾಹಿತಿ ನೀಡಬೇಕು.

4) ವಿಸ್ತಾರವಾದ ವಾರ್ಷಿಕ ನಿರ್ವಹಣೆಗೆ (ಬಿಡಿ ಭಾಗಗಳ ವೆಚ್ಚವು ಸೇರಿದಂತೆ) ದರ ನಮೂದಿಸತಕ್ಕದ್ದು.

5) ಎಲ್ಲಾ ಸಂಪರ್ಕ ವ್ಯವಸ್ಥೆಗಳಿಗೂ ಒಟ್ಟಾಗಿ ಟೆಂಡರ್ ಸಲ್ಲಿಸಬಹುದು. ಅಥವಾ ಪ್ಯಾನಾಸೋನಿಕ್/ಆಪ್ಟಿಮಾ/ಕಿಯೋನಿಕ್ಸ್ ಸಂಪರ್ಕ ವ್ಯವಸ್ಥೆಗೆ ಮಾತ್ರ ಟೆಂಡರ್ ಸಲ್ಲಿಸಬಹುದು. ಅದೇ ರೀತಿ "ನಿಟ್‌ಸುಕೋ" ಮತ್ತು "ಮೆಲ್ಟ್ರಾನ್" ಸಂಪರ್ಕ ವ್ಯವಸ್ಥೆಗೆ ಪ್ರತ್ಯೇಕವಾಗಿ ಟೆಂಡರ್ ಸಲ್ಲಿಸಬಹುದಾಗಿದೆ.

6) ದೂರು ಬಂದಾಗ ದುರಸ್ಥಿಪಡಿಸುವುದಲ್ಲದೆ, ಕನಿಷ್ಟ ತಿಂಗಳಿಗೊಮ್ಮೆ ತಂತ್ರಜ್ಞರಿಂದ ನಿರೋಧಾತ್ಮಕ ನಿರ್ವಹಣೆ (ಪ್ರಿವೆಂಟಿವ್ ಮೆಂಟೇನೆನ್ಸ್) ಮಾಡಿಸತಕ್ಕದ್ದು.

7) ವಿಸ್ತಾರವಾದ ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಿದಲ್ಲಿ ತೃಪ್ತಿಕರವಾಗಿ ಸರ್ವೀಸ್ ಮಾಡಿದ ನಂತರ ಪ್ರತಿ 3 ತಿಂಗಳಿಗೊಮ್ಮೆ 4 ಕಂತುಗಳಲ್ಲಿ ವಾರ್ಷಿಕ ಸೇವಾ ಹಣವನ್ನು ಸಂದಾಯ ಮಾಡಲಾಗುವುದು.

8) ದರಪಟ್ಟಿಯೊಂದಿಗೆ ಠೇವಣಿ (ಇ.ಎಂ.ಡಿ.) ಹಣ ರೂ. 15,000-00ಕ್ಕೆ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು-1, ಇವರಿಗೆ ಸಂಬೋಧಿಸಿ ಲಗತ್ತಿಸತಕ್ಕದ್ದು. ರೂ. 15,000-00ಗಳ ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

9) ಅಯಶಸ್ವಿ ಟೆಂಡರ್‌ದಾರರ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು. ಅದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.

10) ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ವಾರ್ಷಿಕ ಅವಧಿ ಮುಗಿದ ನಂತರ ಅವರ ಕಾರ್ಯನಿರ್ವಹಣೆ ಬಗ್ಗೆ ಯಾವುದೇ ದೂರು ಇಲ್ಲದಿದ್ದಲ್ಲಿ, ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಾಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.

11) ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 20-12-2003ರಂದು ಮಧ್ಯಾಹ್ನ 3-00 ಗಂಟೆಯ ಒಳಗೆ ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಬೆಂಗಳೂರು-1, ಈ ಕಚೇರಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

12) ಯಾವುದೇ ಕಾರಣಗಳನ್ನು ನೀಡದೇ, ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

13) ಟೆಂಡರ್‌ಗಳನ್ನು ಟೆಂಡರ್ ಬುಲೆಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು, ಇಲ್ಲಿ ಟೆಂಡರ್ ದಾರರ ಸಮ್ಮುಖದಲ್ಲಿ ದಿನಾಂಕ: 20-12-2003ರ ಮಧ್ಯಾಹ್ನ 4-00 ಗಂಟೆಗೆ ತೆರೆಯಲಾಗುವುದು.

**ಹೆಚ್.ಕೆ. ರವಿಮೂರ್ತಿ**

ಪಿ.ಆರ್. 743

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1)

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಇಡಿ 219 ಡಿಸಿಇ 2003, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2003**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 89 ಡಿಸಿಇ 97 ದಿನಾಂಕ: 26-05-2003ರಲ್ಲಿ ಈ ಕೆಳಕಂಡ ತಿದ್ದುಪಡಿಗಳನ್ನು ಮಾಡಿ ಓದಿಕೊಳ್ಳತಕ್ಕದ್ದು.

| ಕ್ರ. ಸಂ. | ಸರ್ಕಾರ ಅಧಿಸೂಚನೆಯಲ್ಲಿನ ಕ್ರ. ಸಂ. | ಹಾಲಿ ನಮೂದಿತವಾಗಿರುವುದು | ಈಗ ತಿದ್ದುಪಡಿ ಮಾಡಲಾಗಿರುವುದು |
|---|---|---|---|
| 1 | 2 | 3 | 4 |
| **ಎನ್.ಇ.ಟಿ. ಆಯ್ಕೆ ಪಟ್ಟಿ**<br>**ಕನ್ನಡ** | | | |
| 01 | 16 | ಪಾಟೀಲ್ ಶ್ರೀಕಂಠ ವಿಶ್ವನಾಥ | ಪಾಟೀಲ ಶ್ರೀಕಾಂತ ವಿಶ್ವನಾಥ |
| 02 | 19 | ಗಂಗಾಧರ .ಜೆ | ಗಂಗಾಧರ್ .ಜೆ |
| 03 | 21 | ರಾಜಶೇಖರ್ ಪಿ | ರಾಜಶೇಖರ್ .ಪಿ.ಹೆಚ್. |
| **ಅರ್ಥಶಾಸ್ತ್ರ** | | | |
| 04 | 37 | ಶಂಕರಪಾಟೀಲ್. ವೈ<br>ಜನ್ಮ ದಿನಾಂಕ:21-10-60 | ಶಂಕರ ಪಾಟಾಳಿ. ವೈ<br>25-10-60 |
| 05 | 44 | ಮಂಜುನಾಥ ಎಂ ಪಾಟೀಲ್ ಮೀಸಲಾತಿ ವರ್ಗ 2 ಬಿ | ಮಂಜುನಾಥ ಎಂ ಪಾಟೀಲ ಇವರ ಮೀಸಲಾತಿ ವರ್ಗ (ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಾಗ ಯಾವ ಗುಂಪಿನಿಂದ ತುಂಬಲಾಗಿದೆ ಎಂಬ ಕಾಲಂ ನಲ್ಲಿ 3 ಬಿ) |
| 06 | 46 | ಸೋಮಶೇಖರ್ ಇವರ ಮೀಸಲಾತಿ ವರ್ಗ 2ಎ | ಸೋಮಶೇಖರ್ ಇವರ ಮೀಸಲಾತಿ ವರ್ಗ ಎಸ್‌ಸಿ |
| **ರಾಜ್ಯಶಾಸ್ತ್ರ** | | | |
| 07 | 50 | ನೂರ್ ಪಾಷಾ ಎನ್ | ನೂರ್ ಬಾಷಾ ಎನ್ |

| 1 | 2 | 3 | 4 |
|---|---|---|---|
| | | ವಾಣಿಜ್ಯಶಾಸ್ತ್ರ | |
| 08 | 58 | ಸುವರ್ಣಮಾಲಿನಿ. ವಿ.<br>ಜನ್ಮ ದಿನಾಂಕ:29-01-67 | ಸುವರ್ಣಮಾಲಿನಿ ಬಿ<br>ಜನ್ಮ ದಿನಾಂಕ: 29-01-68 |
| 09 | 59 | ರಾದಮ್ಮ ಆರ್.ಎನ್. | ರಾಧಮ್ಮ ಆರ್.ಎಸ್ |
| 10 | 61 | ಆದೇಶದ ಕಾಲಂ 4ರಲ್ಲಿ ಮೀಸಲಾತಿ ವರ್ಗ 2ಎ | ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಾಗ ಯಾವ ಗುಂಪಿನಿಂದ ತುಂಬಲಾಗಿದೆ ಎಂಬ ಕಾಲಂ ನಲ್ಲಿನ ಆದೇಶದ ಕಾಲಂ 5ರಲ್ಲಿ ಮೀಸಲಾತಿ ವರ್ಗ - ಸಾಮಾನ್ಯ ವರ್ಗ |
| | | ಸಮಾಜಶಾಸ್ತ್ರ | |
| 11 | 66 | ರಾಘವ ನಾಯಕ | ರಾಘವ ನಾಯ್ಕ |
| 12 | 67 | ರಾಜೇಶ್ವರಿ | ರಾಜೇಶ್ವರಿ. ಎ |

ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 89 ಡಿಸಿಇ 97 ದಿನಾಂಕ: 23-06-2003ರಲ್ಲಿ ಈ ಕೆಳಕಂಡ ತಿದ್ದುಪಡಿಗಳನ್ನು ಮಾಡಿ ಓದಿಕೊಳ್ಳತಕ್ಕದ್ದು.

**ನಾನ್ ಎನ್‌ಇಟಿ ಆಯ್ಕೆ ಪಟ್ಟಿ**

**ಇಂಗ್ಲೀಷ್**

| | | | |
|---|---|---|---|
| 13 | 17 | ವರ್ಗ 2ಎ | ಸಾಮಾನ್ಯ |
| 14 | 20 | ಜನ್ಮ ದಿನಾಂಕ:23-06-69 | ಜನ್ಮ ದಿನಾಂಕ:28-06-69 |
| | | ವಾಣಿಜ್ಯಶಾಸ್ತ್ರ | |
| 15 | 02 | ಹಸೀನಾ ಖಾನಂ ಎಸ್.ಜೆ | ಹಸೀನಾ ಖಾನಂ |
| 16 | 23 | ಮಂಡರಪಗಿ ವಿ | ಮುಂಡರಗಿ ಪಿ.ಹೆಚ್ |
| 17 | 25 | ಕರುಣಾಕರ .ಕೆ | ಕರುಣಾಕರ |
| 18 | 40 | ಮಾಡವಲ .ಬಿ.ಕೆ. | ಮದವಾಲ ಬಿ.ಕೆ |
| 19 | 48 | ನಳಿನಿಚಂದ್ರ ಕೆ.ಎಸ್ | ನಳಿನಚಂದ್ರ ಕೆ.ಎಸ್ |
| | | ಗಣಿತಶಾಸ್ತ್ರ | |
| 20 | 04 | ರಮೇಶ್ ಹೆಚ್ | ರಮೇಶ್ ಹೆಚ್.ಜಿ |
| | | ರಾಜ್ಯಶಾಸ್ತ್ರ | |
| 21 | 17 | ಬಸಪಟ್ಟಣ ಎಸ್.ಕೆ. | ಬಸಪಟ್ಟಣೆ ಎಸ್.ಎ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 732

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ

**ಪ್ರಾಂಶುಪಾಲರ ಕಛೇರಿ, ಸರ್ಕಾರಿ ಎಸ್‌ಕೆಎಸ್‌ಜೆಟಿ ಸಂಸ್ಥೆ, ಕೆ.ಆರ್. ವೃತ್ತ, ಬೆಂಗಳೂರು-01**

**ಅಧಿಸೂಚನೆ**

**ಸಂಖ್ಯೆ: ಎಸ್‌ಕೆಜೆ 80 ಎಸ್‌ಪಿಎಸ್ 2001-02, ದಿನಾಂಕ: 18ನೇ ಡಿಸೆಂಬರ್ 2003**

ಈ ಸಂಸ್ಥೆಯಲ್ಲಿನ ಅನುಪಯುಕ್ತ ವಸ್ತುಗಳನ್ನು (ಯಂತ್ರೋಪಕರಣ, ಪೀಠೋಪಕರಣ, ಉಪಕರಣಗಳು ಇತ್ಯಾದಿ) ದಿನಾಂಕ: 18-12-2003 ರಂದು ಬೆಳಿಗ್ಗೆ 11 ಗಂಟೆಯಿಂದ 5.30ರ ವರೆಗೆ ಬಹಿರಂಗ ಹರಾಜು ಮಾಡಲು ನಿರ್ಧರಿಸಿದ್ದು, ಸಂಬಂಧಪಟ್ಟ ಐಟಂಗಳನ್ನು ಸದರಿ ಬಿಡ್‌ದಾರರು ತಮಗೆ ಬಿಡ್ ಮಾಡಲಾದ ವಸ್ತುಗಳನ್ನು ಪಡೆಯಲು ಈ ಸಂಸ್ಥೆಯ ಕಛೇರಿಯಲ್ಲಿ ಮಾಹಿತಿಪಡೆದು ಸಂಪೂರ್ಣ ಹಣ ಪಾವತಿ ಮಾಡಿ ರಶೀದಿ ಪಡೆದು ಬಿಡ್ ಮಾಡಲಾದ ವಸ್ತುಗಳನ್ನು ಈ ಅಧಿಸೂಚನೆ ಪ್ರಕಟವಾದ 8(ಎಂಟು) ದಿನದ ಒಳಗೆ ತೆಗೆದುಕೊಂಡು ಹೋಗತಕ್ಕದ್ದು. ತಪ್ಪಿದ್ದಲ್ಲಿ ಬಿಡ್ ಮಾಡಲಾದ ಐಟಂಗಳ ಬಗ್ಗೆ ಅವರಿಗೆ ಯಾವುದೇ ರೀತಿಯ ಹಕ್ಕು ಇರುವುದಿಲ್ಲ. ಹರಾಜು ಹಾಕಲಾಗುವ ವಸ್ತುಗಳು ಯಾವ ಸ್ಥಿತಿಯಲ್ಲಿದೆಯೋ ಹಾಗೆ ಬಿಡ್‌ದಾರರು ಸ್ವೀಕರಿಸತಕ್ಕದ್ದು.

ಪಿ.ಆರ್. 735

ಪ್ರಾಂಶುಪಾಲರು

ಸರ್ಕಾರಿ ಎಸ್‌ಕೆಎಸ್‌ಜೆಟಿ ಸಂಸ್ಥೆ, ಬೆಂಗಳೂರು.

**ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಪೋಸ್ಟ್ ಬಾಕ್ಸ್ ನಂ 7648, ಬೆಂಗಳೂರು-76**

**ಪುಸ್ತಕಗಳ ಮುದ್ರಣಕ್ಕಾಗಿ ಟೆಂಡರ್**

**ಸಂ:ತೋಇ:ಜಂನಿ:(ಜೀವತ):ಹಿಸತೋನಿ:ಸಅ:ಸತೋಅ:52:2003-04, ದಿನಾಂಕ: 6ನೇ ನವೆಂಬರ್ 2003**

ಬಯೋಟೆಕ್ನಾಲಜಿ ಕೇಂದ್ರ ಹುಳಿಮಾವು, ಬೆಂಗಳೂರು-76 ಇಲ್ಲಿನ ಉನ್ನತ ತರಬೇತಿ ಮತ್ತು ಅಭಿವೃದ್ಧಿ ಕೇಂದ್ರದ ವತಿಯಿಂದ 2003-04ನೇ ಸಾಲಿನಲ್ಲಿ ಔಷಧಿ ಮತ್ತು ಸುಗಂಧ ದ್ರವ್ಯ ಬೆಳೆಗಳ ಬೇಸಾಯ ಮಾಹಿತಿಯ (ಆಂಗ್ಲ) ಪುಸ್ತಕಗಳ ಮುದ್ರಣಕ್ಕಾಗಿ ಮೊಹರಾದ

ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಆಸಕ್ತಿಯುಳ್ಳವರು ಟೆಂಡರ್ ಫಾರಂಗಳು ನಿಬಂಧನೆಗಳು ಹಾಗೂ ಇತರೆ ಮಾಹಿತಿಗಳನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಸಮನ್ವಯಾಧಿಕಾರಿ) ಹುಳಿಮಾವು ಬೆಂಗಳೂರು ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ದಿನಾಂಕ: 25-11-2003 ರಿಂದ 04-12-2003ರ ಒಳಗೆ ಪಡೆಯಬಹುದು. ಟೆಂಡರ್ ಫಾರಂನ ಮೊತ್ತ ರೂ.50/- ಟೆಂಡರ್ ಸ್ವೀಕರಿಸುವ ಕಡೆಯ ದಿನಾಂಕ 08-12-2003. ಟೆಂಡರ್‌ಗಳನ್ನು ಅದೇ ದಿನ ಸಂಜೆ 4.00 ಗಂಟೆಗೆ ತೆರೆಯಲಾಗುವುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು

ಪಿ.ಆರ್. 737 (ಸಮನ್ವಯಾಧಿಕಾರಿ) ಹುಳಿಮಾವು, ಬೆಂಗಳೂರು.

## ಧಾರ್ಮಿಕ ದತ್ತಿ ಇಲಾಖೆ

## ಕಾರ್ಯನಿರ್ವಾಹಕ ಅಧಿಕಾರಿಗಳ ಕಛೇರಿ, ಶ್ರೀ ಬನಶಂಕರಿ ದೇವಸ್ಥಾನ, ಕನಕಪುರ ರಸ್ತೆ, ಬೆಂಗಳೂರು

## ಟೆಂಡರ್ ಅಧಿಸೂಚನೆ (2 ಕವರ್ ಪದ್ಧತಿ)

## ಸಂಖ್ಯೆ:ಬಿಎಸ್‌ಟಿ:3:ಸಿಆರ್.6:03-04

ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಯಿಂದ ಲೋಕೋಪಯೋಗಿ ಇಲಾಖೆ: ಸಿಪಿಡಬ್ಲ್ಯೂಡಿ:ಎಂಇಎಸ್‌ನಲ್ಲಿ ನೋಂದಾಯಿಸಿರುವ ಗುತ್ತಿಗೆದಾರರಿಂದ ಹಾಗೂ ಪ್ರತಿಷ್ಠಿತ ಕಂಪನಿಗಳಿಂದ ಮತ್ತು ಉದ್ದಿಮೆ ಈ ಕೆಳಗೆ ನಮೂದಿಸಿರುವ ಕಾಮಗಾರಿಯನ್ನು ಕೈಗೊಳ್ಳಲು ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಸಾರ್ವಜನಿಕ ಸಂಗ್ರಹಣೆಯಲ್ಲಿ ಕರ್ನಾಟಕ ಪಾರದರ್ಶಕತೆ ಕಾಯ್ದೆ 2000ರ ಅನ್ವಯ ಆಹ್ವಾನಿಸಲಾಗಿದ್ದು ಟೆಂಡರ್ ಸ್ವೀಕರಿಸುವ ದಿನಾಂಕದಂದು ಸಂಜೆ:4.30 ಗಂಟೆಗೆ ಸಾಧ್ಯವಾದಲ್ಲಿ ತೆರೆಯಲಾಗುವುದು. ಇಲ್ಲದಿದ್ದಲ್ಲಿ ಮುಂದಿನ ಕಛೇರಿಯ ದಿನದಂದು ಟೆಂಡರ್‌ಗಳನ್ನು ಸಲ್ಲಿಸಿದ ಗುತ್ತಿಗೆದಾರರು ಇಲ್ಲವೇ ಅವರ ಪ್ರತಿನಿಧಿಯ ಸಮ್ಮುಖದಲ್ಲಿ ತೆರೆಯಲಾಗುವುದು.

ಟೆಂಡರ್ ದಾಖಲೆಗಳನ್ನು ಕಾಲಂ 5 ರಂತೆ ನಿಗದಿಪಡಿಸಿದ ದರವನ್ನು ಪಾವತಿಸಿ ತೆಗೆದುಕೊಳ್ಳಬಹುದಾಗಿದೆ. ಈ ಹಣವನ್ನು ವಾಪಸ್ ನೀಡಲಾಗುವುದಿಲ್ಲ. ಈ ದಾಖಲೆಗಳನ್ನು ಕಾಲಂ 9 ರಲ್ಲಿ ನಿಗದಿಪಡಿಸಿದ ದಿನಗಳಂದು ಕಛೇರಿಯ ವೇಳೆಯಲ್ಲಿ ಅಂದರೆ ಪೂರ್ವಾಹ್ನ 10.00 ಗಂಟೆಯಿಂದ ಸಂಜೆ:5.30 ಗಂಟೆಯವರೆಗೆ (ಊಟದ ಸಮಯ ಬಿಟ್ಟು) ಪಡೆಯಬಹುದಾಗಿದೆ. ಈ ಕಾಮಗಾರಿಯ ಬಗ್ಗೆ ನಕ್ಷೆ ಮತ್ತು ಇತರೆ ವಿವರಗಳನ್ನು ಕಛೇರಿ ಸಮಯದಲ್ಲಿ ವೀಕ್ಷಿಸಬಹುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ | ಇ.ಎಂ.ಡಿ. ಮೊತ್ತ | ಖಾಲಿ ಟೆಂಡರ್ ಬೆಲೆ | ಗುತ್ತಿಗೆದಾರರ ದರ್ಜೆ | ಕಾಮಗಾರಿಯನ್ನು ಪೂರ್ಣಗೊಳಿಸುವ ಕಾಲಾವಧಿ | ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ ಸಂಜೆ-4-00 ವರೆಗೆ | ಖಾಲಿ ಟೆಂಡರ್ ವಿತರಿಸುವ ದಿನಾಂಕ ಸಂಜೆ-5.30 ವರೆಗೆ | ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ ಸಂಜೆ-4.00 ವರೆಗೆ | ಟೆಂಡರ್ ಕರೆಯ ಸಂಖ್ಯೆ |
|---|---|---|---|---|---|---|---|---|---|---|
| 1. | ಶ್ರೀ ಬನಶಂಕರಿ ದೇವಾಲಯ ಜೀರ್ಣೋದ್ಧಾರ ಕಾಮಗಾರಿ ವಸತಿ ಗೃಹಗಳ ನಿರ್ಮಾಣ ಕಛೇರಿ ಕಟ್ಟಡಗಳು ಅಡಿಗೆ ಮನೆ | 3.75 ಕೋಟಿ | 3,75,000 | 10,000+ ತೆರಿಗೆ | ದರ್ಜೆ-1 (ಪ್ರತಿಷ್ಠಿತ ಉದ್ದಿಮೆ ಹಾಗೂ ಕಂಪನಿಗಳು) | 12 ತಿಂಗಳು (ಮಳೆಗಾಲ ಸೇರಿದಂತೆ) | 17-12-03 | 22-12-2003 | 29-12-2003 | ಮೊದಲ ಕರೆ |
| | ಓವರ್ ಹೆಡ್ ಟ್ಯಾಂಕ್ ಮತ್ತು ಇತರೆ ಅಭಿವೃದ್ಧಿ ಕಾಮಗಾರಿಗಳು, ಕನಕಪುರ ರಸ್ತೆ, ಬೆಂಗಳೂರು | | | | | | | | | |

ಟೆಂಡರ್ ನಿಬಂಧನೆಗಳನ್ನು ಹಾಗೂ ಹೆಚ್ಚಿನ ಮಾಹಿತಿಗಳನ್ನು
ಧಾರ್ಮಿಕ ದತ್ತಿ ಆಯುಕ್ತರ ಕಛೇರಿ,
ಆಲೂರು ವೆಂಕಟರಾವ್ ರಸ್ತೆ, ಚಾಮರಾಜಪೇಟೆ, ಬೆಂಗಳೂರು.
ಹಾಗೂ ಈ ಕಛೇರಿಯಲ್ಲಿ ಪಡೆಯಬಹುದಾಗಿದೆ.

ಕಾರ್ಯನಿರ್ವಾಹಕ ಅಧಿಕಾರಿ ಹಾಗೂ ಸದಸ್ಯ ಕಾರ್ಯದರ್ಶಿ,

ಪಿ.ಆರ್. 738 ಶ್ರೀ ಬನಶಂಕರಿ ದೇವಸ್ಥಾನ, ಬನಶಂಕರಿ, ಬೆಂಗಳೂರು

## ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ,

## ಕರ್ನಾಟಕ ರಾಜ್ಯ, ಬೆಂಗಳೂರು-560 001

## ಟೆಂಡರ್ ಪ್ರಕಟಣೆ

## ಸಂಖ್ಯೆ: ಸಂಗ್ರಹ-2(3)54/2003-04, ದಿನಾಂಕ: 5ನೇ ನವೆಂಬರ್ 2003

2003-04ನೇ ಸಾಲಿಗೆ ಪೊಲೀಸ್ ಇಲಾಖೆಯ ಬೆರಳು ಮುದ್ರೆ ಸಂಗ್ರಹಾಲಯ ಘಟಕದವರಿಗೆ ಅಗತ್ಯವಿರುವ ಈ ಕೆಳಕಂಡ ಉಪಕರಣಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು (ಟೆಂಡರ್) "ದ್ವಿ ಲಕೋಟೆ ಪದ್ಧತಿ" ಯಲ್ಲಿ ಆಹ್ವಾನಿಸಲಾಗಿದೆ.

1) High Intensity Light Source — 09 Nos
2) Green & Red Magnetic Florescent Powders — 15 Tins each
3) Nindydrine Sprayer — 20 Nos
4) Cynowand — 20 Nos
5) Gem Magnetic Powders — 10 Tins

**ಸೂಚನೆ:** ಮೇಲಿನ ಉಪಕರಣದ ಉತ್ಪಾದಕರು/ಉತ್ಪಾದಕ ಘಟಕ/ಉತ್ಪಾದಕ ಘಟಕದ ಅಧಿಕೃತ ಏಜೆಂಟುದಾರರು, ಪ್ರಖ್ಯಾತ ಕಂಪನಿಯ ಬ್ರಾಂಡ್‌ಗಳಿಗೆ ಆದ್ಯತೆ ನೀಡಲಾಗುವುದು.

2. ವಿವರ ಹಾಗೂ ಷರತ್ತನ್ನು ಒಳಗೊಂಡ ಟೆಂಡರ್ ಅರ್ಜಿಯನ್ನು ನಿರ್ದಿಷ್ಟತೆಯೊಂದಿಗೆ (Specifications) ದಿನಾಂಕ: 10-11-2003ರಿಂದ 25-11-2003ರವರೆಗೆ ಕಛೇರಿಯ ಕೆಲಸದ ದಿನದಂದು ಬೆಳಿಗ್ಗೆ 10 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು ಪ್ರತಿ ಟೆಂಡರ್ ಅರ್ಜಿಯ ಬೆಲೆ ರೂ.200-00 ಆಗಿದ್ದು, ಇದನ್ನು ಮರು ಪಾವತಿ ಮಾಡಲಾಗುವುದಿಲ್ಲ. ಟೆಂಡರ್ ಅರ್ಜಿಯನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್ ಮೂಲಕ ಪಾವತಿಸಿದರೆ ಅಂಗೀಕರಿಸುವುದಿಲ್ಲ) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯ ಬಯಸುವವರು ರೂ.200/-ಗಳಿಗೆ ಡಿ.ಡಿ.ಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಹಾಗೂ ಸ್ವವಿಳಾಸದೊಂದಿಗೆ ಲಕೋಟೆಯ ಮೇಲೆ ರೂ.30-00ಗಳ ಅಂಚೆ ಚೀಟಿಯನ್ನು ಅಂಟಿಸಿ ಕಳುಹಿಸಲು ಕೋರಿದೆ.

3. ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ ಎರಡು ಪ್ರತ್ಯೇಕ ಕವರುಗಳಲ್ಲಿ ಈ ಕೆಳಕಂಡಂತೆ ಕಳುಹಿಸಬೇಕಾಗಿರುತ್ತದೆ.

ಅ) ಮೊಹರು ಮಾಡಿದ **ಒಂದನೇ ಕವರಿನ** ಮೇಲ್ಭಾಗದಲ್ಲಿ "ಉಪಕರಣಗಳ" ಸರಬರಾಜಿಗಾಗಿ ಇ.ಎಂ.ಡಿ. ಮತ್ತು ಇತರೆ ವಿವರಣೆ ಎಂದು ಹಾಗೂ ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

ಆ) ಮೊಹರು ಮಾಡಿದ **ಎರಡನೇ ಕವರಿನ** ಮೇಲ್ಭಾಗದಲ್ಲಿ "ಉಪಕರಣಗಳ ಬೆಲೆ ಪಟ್ಟಿ" ಎಂದು ಮತ್ತು ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

4. **ಮೊದಲನೆ ಕವರ್:** ಮೊಹರು ಮಾಡಿದ ಮೊದಲನೆ ಕವರ್ ಈ ಕೆಳಕಂಡ ಮಾಹಿತಿಯನ್ನು ಒಳಗೊಂಡಿರಬೇಕು.

ಅ) ಸರಬರಾಜು ಮಾಡಲು ಇಚ್ಚಿಸುವ ಪ್ರತಿಯೊಂದು ಸಾಮಗ್ರಿಗಳಿಗೆ ಇ.ಎಂ.ಡಿಯ ಬಾಬ್ತು ಪ್ರತ್ಯೇಕವಾಗಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ಗಳು (ಇ.ಎಂ.ಡಿಯಲ್ಲಿ ನಮೂದಿಸಲಾದ ಸಾಮಗ್ರಿಯ ಒಟ್ಟು ಬೆಲೆಗೆ ಶೇಕಡ 2ರಷ್ಟು ಇರಬೇಕು) ಸರಬರಾಜು ಮಾಡುವ ಪ್ರತಿಯೊಂದು ಸಾಮಗ್ರಿಗಳಿಗೆ ಪ್ರತ್ಯೇಕ ಇ.ಎಂ.ಡಿ.ಗಳನ್ನು ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಪರಿಗಣಿಸಲಾಗುವುದಿಲ್ಲ.

ಆ) ಸರಬರಾಜು ಮಾಡುವ ಸಂಸ್ಥೆಯ ಸಾಮರ್ಥ್ಯದ ಬಗ್ಗೆ ಮಾಹಿತಿ ಮತ್ತು ಸರಬರಾಜು ಮಾಡುವ ಸಾಮಗ್ರಿಗಳನ್ನು ಉತ್ಪಾದಿಸಲಾಗುತ್ತಿದೆಯೇ ಅಥವಾ ಇಲ್ಲವೆ ಎಂಬ ಬಗ್ಗೆ ದಾಖಲಾತಿ

ಇ) ಆರ್ಥಿಕ ಸ್ಥಿತಿ ಮತ್ತು ಸಾಮರ್ಥ್ಯದ ಬಗ್ಗೆ.

ಈ) ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ಬಗ್ಗೆ.

ಉ) ವಾರ್ಷಿಕ ವಹಿವಾಟು

ಊ) ಟೆಂಡರ್ ಅರ್ಜಿದಾರರು ಸರಬರಾಜು ಮಾಡಲು ಬಯಸುವ ಸಾಮಗ್ರಿಗಳ ಪಟ್ಟಿ, ಪಟ್ಟಿಯಲ್ಲಿ ಬೆಲೆಯನ್ನು ನಮೂದಿಸಬಾರದು.

ಋ) ಅನುಭವ ಮತ್ತು ಹಿಂದೆ ಸರಬರಾಜು ಮಾಡಿರುವ ಬಗ್ಗೆ.

ೠ) ಟೆಂಡರ್ ಅಂಗೀಕಾರ ಸಮಿತಿಗೆ ಉಪಕರಣಗಳ ಮಾದರಿಯ ಅವಶ್ಯಕತೆ ಕಂಡು ಬಂದಲ್ಲಿ ಸಂಸ್ಥೆಗಳು ಅವುಗಳನ್ನು ಪ್ರದರ್ಶಿಸತಕ್ಕದ್ದು.

5. **ಎರಡನೇ ಕವರ್:** ಮೊಹರು ಮಾಡಿದ ಎರಡನೇ ಕವರ್ ಟೆಂಡರ್ ಅರ್ಜಿ ಮತ್ತು ಸರಬರಾಜು ಮಾಡುವ ಸಾಮಗ್ರಿಯ ಹೆಸರು ಮತ್ತು ಬೆಲೆ ಪಟ್ಟಿಯನ್ನು ಮಾತ್ರ ಹೊಂದಿರಬೇಕು.

6. ಮೊಹರು ಮಾಡಿದ ಎರಡು ಕವರ್‌ಗಳನ್ನು ಮೇಲೆ ತಿಳಿಸಿದ ರೀತಿಯಲ್ಲಿ ಶ್ರೀ ಎಸ್. ರಾಮಕೃಷ್ಣ, ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಕೇಂದ್ರಸ್ಥಾನ-1) ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ನೃಪತುಂಗ ರಸ್ತೆ, ಬೆಂಗಳೂರು-560001ರವರ ಹೆಸರಿಗೆ ದಿನಾಂಕ: 10-12-2003ರ ಸಂಜೆ 5.00 ಗಂಟೆ ಒಳಗೆ ತಲುಪುವಂತೆ ಸಲ್ಲಿಸತಕ್ಕದ್ದು ತದನಂತರ ಸಲ್ಲಿಸಲಾದ/ಪಡೆದ ಅರ್ಜಿಗಳನ್ನು ಪರಿಗಣಿಸುವುದಿಲ್ಲ.

7. ಟೆಂಡರ್ ಆಹ್ವಾನಿಸಿದ ಅಧಿಕಾರಿಯು ದಿನಾಂಕ: 11-12-2003ರಂದು ಬೆಳಿಗ್ಗೆ 11.00 ಗಂಟೆಗೆ ಮೊದಲನೆ ಕವರನ್ನು ತೆರೆದು, ಸರಬರಾಜು ಸಂಸ್ಥೆಗಳು ಸಲ್ಲಿಸಲಾದ ಮಾಹಿತಿಗಳನ್ನು/ದಾಖಲಾತಿಗಳನ್ನು ಪರಿಶೀಲಿಸಿ, ಸರಬರಾಜು ಮಾಡುವ ಅರ್ಹ ಸಂಸ್ಥೆಗಳ ಪಟ್ಟಿಯನ್ನು ತಯಾರಿಸಲಾಗುವುದು ಇಚ್ಛೆಯುಳ್ಳ ಟೆಂಡರ್‌ದಾರರು/ಪ್ರತಿನಿಧಿಗಳು, ಟೆಂಡರ್ ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.

8. ಪ್ರತಿ ಸಾಮಗ್ರಿಗಳಿಗೆ ಪ್ರತ್ಯೇಕವಾದ ಇ.ಎಂ.ಡಿ.ಯನ್ನು ಡಿ.ಡಿ. ಮೂಲಕ ಪಾವತಿಸದಿದ್ದರೆ, ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಅಂಚೆ ಮೂಲಕ/ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿಗಳು ಮತ್ತು ದಾಖಲಾತಿಗಳು ವಿಳಂಬವಾಗಿ ತಲುಪಿದ್ದಲ್ಲಿ/ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೇ ಸರಾಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್
ಪೊಲೀಸ್‌ರವರ ಪರವಾಗಿ, ಬೆಂಗಳೂರು

ಪಿ.ಆರ್. 740

## ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು-560 001

## ಟೆಂಡರ್ ಪ್ರಕಟಣೆ

**ಸಂಖ್ಯೆ: ಸಂಗ್ರಹ-2(3)103/2002-03, ದಿನಾಂಕ: 11ನೇ ನವೆಂಬರ್ 2003**

ಪೊಲೀಸ್ ಇಲಾಖೆಗೆ ಅಗತ್ಯವಿರುವ ಕೆಳಕಂಡ ಬ್ಯಾಂಡ್ ಉಪಕರಣಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು (ಟೆಂಡರ್) ಹೆಸರಾಂತ ಬ್ಯಾಂಡ್ ಉಪಕರಣಗಳ ಕಂಪನಿಗಳಿಂದ/ಉತ್ಪಾದಕರಿಂದ/ಅಧಿಕೃತ ಮಾರಾಟಗಾರರಿಂದ/ ಏಜೆನ್ಸಿಗಳಿಂದ ಆಹ್ವಾನಿಸಲಾಗಿದೆ.

| Sl. No. | Name of the Band Instrument | Total Nos. required. |
|---|---|---|
| 1. | Bag Pipes | 51 |
| 2. | Bugles | 101 |
| 3. | Bass Drum | 22 |
| 4. | Bass Band Drum Stand | 12 |
| 5. | 'B' flat cornet | 48 |
| 6. | 'B' flat clarinet | 29 |
| 7. | 'B' Flat Trumpet | 46 |
| 8. | Baritone | 13 |
| 9. | Bass trombone | 1 |
| 10. | Cornet | 2 |
| 11. | Clarinet | 2 |
| 12. | Chest Bass | 17 |
| 13. | Cymbal | 63 |
| 14. | Circle Bass | 5 |
| 15. | Drum Kit | 7 |
| 16. | Drum Major Stick | 26 |
| 17. | Dholak | 1 |
| 18. | Enphonium | 33 |
| 19. | Electronic Key Board | 1 |
| 20. | E flat Saxophone | 11 |
| 21. | E Flat Clarinet | 2 |
| 22. | E Flat Horn | 4 |
| 23. | Flute | 2 |
| 24. | Guitar | 2 |
| 25. | Gramaphone | 2 |
| 26. | Harmonium | 1 |
| 27. | Kettle Drum | 1 |
| 28. | Kantar | 1 |
| 29. | Music Stand | 1 |
| 30. | Maracas | 8 |
| 31. | Metropone | 1 |
| 32. | Piccolo | 2 |
| 33. | Saxophone | 5 |
| 34. | Speaker Box | 1 |
| 35. | Side Drum | 38 |
| 36. | Side Drum Stick | 3 |
| 37. | Speaker Horn | 4 |
| 38. | Trumpet | 13 |
| 39. | Tenor Trambone | 11 |
| 40. | Triangle | 2 |
| 41. | Top Dhole | 8 |
| 42. | Tape Recorder | 5 |
| 43. | Tenor Saxophone | 1 |
| 44. | Tenor Horn | 2 |
| 45. | Tamborine | 1 |
| 46. | Tasha | 1 |

| Sl. No. | Name of the Band Instrument | Total Nos. required. |
|---|---|---|
| 47. | Tenor Drum | 5 |
| 48. | Valvetram | 1 |
| 49. | Amplifier | 1 |

2. ಷರತ್ತುಗಳು ಈ ಕೆಳಕಂಡಂತೆ ಇರುತ್ತದೆ.

1) ಟೆಂಡರ್‌ದಾರರು ದಿನಾಂಕ: 31-3-2003ಕ್ಕೆ ಪೂರ್ಣಗೊಂಡಂತೆ ಭಾರತದಲ್ಲಿ 3 ವರ್ಷಗಳಿಗಿಂತ ಹೆಚ್ಚಾಗಿ ವ್ಯಾಪಾರ ವಹಿವಾಟು ನಡೆಸಿರಬೇಕು. ಇದಕ್ಕೆ ಪೂರಕವಾಗಿ ಸಂಬಂಧಿಸಿದ ಕಂಪನಿಯ ಅಧಿಕಾರಿ/ಸಂಬಂಧಿಸಿದ ಅಧಿಕಾರಿ ನೀಡಲಾದ ನೋಂದಣಿ ಪತ್ರವನ್ನು ನೀಡಬೇಕು.

2) ಟೆಂಡರ್‌ದಾರರು ಕೊನೆಯ ಪಕ್ಷ ಇಂತಹ ಎರಡು ಸರಬರಾಜು ಆದೇಶಗಳನ್ನು ಪೂರೈಸಿರಬೇಕು. ಇದಕ್ಕೆ ಪೂರಕವಾಗಿ ಸಂಬಂಧಿಸಿದ ಅಧಿಕಾರಿ ನೀಡಲಾದ ಪತ್ರವನ್ನು ನೀಡಬೇಕು.

3) ಯಾವುದೇ ರಾಜ್ಯದ ಪೊಲೀಸ್ ಇಲಾಖೆಗೆ/ಪ್ಯಾರ ಮಿಲಿಟರಿ ಫೋರ್ಸ್/ಆರ್ಮಿ/ನೇವಿ/ ಏರ್‌ಫೋರ್ಸ್‌ಗಳಿಗೆ ಸರಬರಾಜು ಮಾಡಲಾದ ಉತ್ಪಾದಕ ಕಂಪನಿ/ಅಧಿಕೃತ ಮಾರಾಟಗಾರರಿಗೆ ಆದ್ಯತೆ ನೀಡಲಾಗುವುದು.

4) ಟೆಂಡರ್‌ದಾರರು ಸರಬರಾಜು ಮಾಡಲು ಬಯಸಿದ ಬ್ಯಾಂಡ್ ಉಪಕರಣಗಳ ಅಧಿಕೃತ ಮಾರಾಟಗಾರರ/ಹಂಚಿಕೆದಾರರ ಬಗ್ಗೆ ದೃಢೀಕರಣ ಪತ್ರವನ್ನು ಲಗತ್ತಿಸಬೇಕು.

5) ಟೆಂಡರ್‌ದಾರರು ವಾರಂಟಿಯ ಬಗ್ಗೆ ಲಿಖಿತವಾಗಿ ಕಂಪನಿಯ/ಸಂಸ್ಥೆಯ ಪತ್ರದಲ್ಲಿ ವಾರಂಟಿಯನ್ನು ನೀಡಬೇಕು.

6) ಟೆಂಡರ್‌ದಾರರು ಸರಬರಾಜು ಮಾಡಲು ಇಚ್ಛಿಸುವ ಬ್ಯಾಂಡ್ ಉಪಕರಣಗಳಿಗೆ ಕೊನೆಯ ಪಕ್ಷ 5 ವರ್ಷಗಳವರೆಗೆ ಬಿಡಿಭಾಗಗಳು ದೊರಕುತ್ತವೆ ಎಂಬ ಬಗ್ಗೆ ದಾಖಲೆ ನೀಡಬೇಕು.

7) ಟೆಂಡರ್‌ದಾರರು ಸರಬರಾಜು ಮಾಡಲು ಇಚ್ಛಿಸುವ ಪ್ರತಿಯೊಂದು ಬ್ಯಾಂಡ್ ಉಪಕರಣಗಳಿಗೆ ಪ್ರತ್ಯೇಕವಾಗಿ ಶೇಕಡ 2ರಷ್ಟು ಇ.ಎಂ.ಡಿ.ಯನ್ನು ಡಿ.ಜಿ. ಮತ್ತು ಐ.ಜಿ.ಪಿ. ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿಗೆ ಪಡೆದ ಡಿ.ಡಿ. ರೂಪದಲ್ಲಿ ಸಲ್ಲಿಸಬೇಕು (ಸೂಚಿಸಿದ ಒಟ್ಟು ಮೌಲ್ಯಕ್ಕೆ ಶೇಕಡ 2 ರಷ್ಟು ಇ.ಎಂ.ಡಿ.)

8) ಅರ್ಜಿದಾರರು ಸರಬರಾಜು ಮಾಡಲು ಬಯಸಿದ ಪ್ರತಿಯೊಂದು ಬ್ಯಾಂಡ್ ಉಪಕರಣಗಳ ಒಂದು ಮಾದರಿಯನ್ನು ದಿನಾಂಕ: 19-12-2003ರ ಒಳಗೆ ಡಿ.ಐ.ಜಿ.ಪಿ (ಕೇ.ಸ್ಥಾ-1) ಪ್ರ.ಕ. ಬೆಂಗಳೂರು ರವರಿಗೆ ಪ್ರತ್ಯೇಕವಾಗಿ ಸಲ್ಲಿಸಬೇಕು.

9) ಟೆಂಡರ್‌ದಾರರು ಸಲ್ಲಿಸುವ ಮಾದರಿ ಬ್ಯಾಂಡ್ ಉಪಕರಣಗಳನ್ನು ಸರ್ಕಾರದಿಂದ/ ಇಲಾಖೆಯ ಮುಖ್ಯಸ್ಥರಿಂದ ರಚಿಸುವ ತಾಂತ್ರಿಕ ಸಮಿತಿಯ ಮುಂದೆ ಮೌಲ್ಯ ನಿರ್ಣಯಕ್ಕಾಗಿ/ಪರಿಶೀಲನೆಗಾಗಿ ಮಂಡಿಸಲಾಯಿತು.

3) ಷರತ್ತು, ನಿರ್ದಿಷ್ಟತೆ ಮತ್ತು ವಿವರಗಳನ್ನು ಒಳಗೊಂಡ ಟೆಂಡರ್ ಅರ್ಜಿಗಳನ್ನು ದಿನಾಂಕ: 18-11-2003 ರಿಂದ 9-12-2003ರವರೆಗೆ ಯಾವುದೇ ಕೆಲಸದ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ. 200/-ಗಳನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್‌ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸುವವರು ರೂ. 200/-ಗಳಿಗೆ ಡಿ.ಡಿ.ಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಕೋರಲಾಗಿದೆ. ಹಾಗೂ ಸ್ವವಿಳಾಸ ಹೊಂದಿದ ಲಕೋಟೆಯ ಮೇಲೆ ರೂ. 30/-ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ.

4) ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡ 2ರಷ್ಟು ಇ.ಎಂ.ಡಿ.ಯನ್ನು ಪ್ರತಿ ಸಾಮಗ್ರಿ ಮೌಲ್ಯಕ್ಕೆ ಮುಂಗಡ ಠೇವಣಿಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿ.ಡಿ. ಹಾಗೂ ಮಾದರಿಗಳು ಹಾಗೂ ಇತರ ದಾಖಲೆಗಳೊಂದಿಗೆ ಅಂದರೆ 1) ಸಂಸ್ಥೆಯ ಆರ್ಥಿಕ ಸ್ಥಿತಿ, ಸಾಮರ್ಥ್ಯ, 2) ಆದಾಯ ತೆರಿಗೆ ತೀರುವಳಿ ಪತ್ರ, 3) ವಾರ್ಷಿಕ ವಹಿವಾಟು 4) ಅನುಭವ 5) ಮಾರಾಟ ತೆರಿಗೆ ತೀರುವಳಿ ಹಾಗೂ 6) ಹಿಂದೆ ಸರಬರಾಜು ಮಾಡಿರುವ ವಿವರಗಳ ಮೊಹರು ಮಾಡಿದ ಲಕೋಟೆಯನ್ನು ಈ ಕಛೇರಿಯ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, (ಕೇಂದ್ರಸ್ಥಾನ-1) ರವರಾದ ಶ್ರೀ ಎಸ್. ರಾಮಕೃಷ್ಣ, ಐ.ಪಿ.ಎಸ್. ರವರಿಗೆ ಹೆಸರಿಸಿ ದಿನಾಂಕ: 19-12-2003 ಸಂಜೆ 5.00 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ಮೊಹರು ಮಾಡಿದ ಲಕೋಟೆಯ ತುದಿಯಲ್ಲಿ "ಬ್ಯಾಂಡ್ ಉಪಕರಣಗಳ" ಸರಬರಾಜಿಗಾಗಿ ಎಂದು ನಮೂದಿಸಿ ಕೆಳಭಾಗದಲ್ಲಿ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸತಕ್ಕದ್ದು.

5) ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 20-12-2003 ರಂದು ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

6) ಪ್ರತಿ ಸಾಮಗ್ರಿಗಳಿಗೆ ಪ್ರತ್ಯೇಕವಾಗಿ ಇ.ಎಂ.ಡಿ.ಯನ್ನು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ/ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ/ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಾಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ. ಕಡಿಮೆ ಬೆಲೆ ಆಯ್ಕೆಯ ಮಾನದಂಡವಾಗಿರುವುದಿಲ್ಲ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್

ಪಿ.ಆರ್. 741 ಪೊಲೀಸ್‌ರವರ ಪರವಾಗಿ,

## ತೋಟಗಾರಿಕೆ ಇಲಾಖೆ
## ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು
## ಅಲ್ಪಾವಧಿ ಟೆಂಡರ್ ಪ್ರಕಟಣೆ

**ಸಂಖ್ಯೆ:ತೋಇ:ಆರ್‌ಡಿಪಿ:ಸತೋಅ:42:2003-04, ದಿನಾಂಕ: 11ನೇ ನವೆಂಬರ್ 2003**

**ವಿಷಯ:** 2003-04ನೇ ಸಾಲಿಗೆ ರಾಜ್ಯ ವಲಯ ಸಹಾಯಧನ ಯೋಜನೆಯಡಿ ಸ್ಪ್ರಿಂಕ್ಲರ್ ಉಪಕರಣಗಳ ಸರಬರಾಜು ಹಾಗೂ ಅಳವಡಿಸಲು ದರ ಒಪ್ಪಂದಕ್ಕಾಗಿ ಟೆಂಡರ್ ಪ್ರಕಟಣೆ.

2003-04ನೇ ಸಾಲಿಗೆ ರಾಜ್ಯ ವಲಯ ಸಹಾಯಧನ ಯೋಜನೆಯಡಿ ಸ್ಪ್ರಿಂಕ್ಲರ್ ಉಪಕರಣಗಳನ್ನು ಸರಬರಾಜು ಮಾಡಲು ಹಾಗೂ ರೈತರ ತಾಕಿನಲ್ಲಿ ಅಳವಡಿಸಲು ದರ ಒಪ್ಪಂದಕ್ಕಾಗಿ ಅರ್ಹ ಸ್ಪ್ರಿಂಕ್ಲರ್ ಉಪಕರಣಗಳ ಉತ್ಪಾದಕರಿಂದ ಮೊಹರಾದ ಕವರ್‌ನಲ್ಲಿ ಟೆಂಡರ್‌ನ್ನು ಆಹ್ವಾನಿಸಿದೆ. ರಾಜ್ಯ ಸರ್ಕಾರದ ಈ ಸಹಾಯಧನ ಯೋಜನೆಗಾಗಿ 2003-04ನೇ ಸಾಲಿಗೆ ಅಂದಾಜು ರೂ.1000 ಲಕ್ಷ ನಿಗದಿಪಡಿಸಿದೆ. ಈ ಅನುದಾನದಡಿ ಹನಿನೀರಾವರಿ ಕಾರ್ಯಕ್ರಮ ಸಹ ಸೇರಿರುತ್ತದೆ. ಖಾಲಿ ಟೆಂಡರ್ ಫಾರಂ ಮತ್ತು ಟೆಂಡರ್ ದಾಖಲೆಯನ್ನು ಆಸಕ್ತಿಯುಳ್ಳ ಉತ್ಪಾದಕರು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರ ಕಛೇರಿಯಿಂದ ರೂ.250/- (ರೂ.ಎರಡು ನೂರ ಐವತ್ತು ಮಾತ್ರ)ಗಳನ್ನು ಸಂದಾಯ ಮಾಡಿ ಪಡೆದುಕೊಳ್ಳುವುದು.

E.M.D. ಮೊತ್ತ ರೂ.1.00 ಲಕ್ಷ (ರೂ.ಒಂದು ಲಕ್ಷ ರೂಪಾಯಿ ಮಾತ್ರ) ವನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರ ಹೆಸರಿನಲ್ಲಿ Crossed Demand Draft ಮೂಲಕ ಟೆಂಡರ್ ಫಾರಂನೊಂದಿಗೆ ಸಲ್ಲಿಸತಕ್ಕದ್ದು.

ಟೆಂಡರ್ ಫಾರಂ ಮತ್ತು ದಾಖಲಾತಿಗಳನ್ನು ದಿನಾಂಕ 08-12-2003 ರವರೆಗೆ ಎಲ್ಲಾ ಸರ್ಕಾರಿ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10.00 ಘಂಟೆಯಿಂದ ಅಪರಾಹ್ನ 5.00 ಘಂಟೆಯವರೆಗೆ ಪಡೆಯಬಹುದು. ಭರ್ತಿ ಮಾಡಿ ಮೊಹರಾದ ಟೆಂಡರ್‌ನ್ನು ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4 ಇಲ್ಲಿ ಸಲ್ಲಿಸಬೇಕಿದ್ದು ಇದನ್ನು ದಿನಾಂಕ: 09.12.2003 ರಂದು ಸಂಜೆ 4.00 ಘಂಟೆ ಒಳಗಾಗಿ ಮುದ್ದಾಂ ಅಥವಾ ಅಂಚೆ ಮುಖಾಂತರ ಸಲ್ಲಿಸಬೇಕು.

ಟೆಂಡರ್‌ನ್ನು ದಿನಾಂಕ 10-12-2003 ರಂದು ಬೆಳಿಗ್ಗೆ 11.00 ಘಂಟೆಗೆ ಕಿರು ಸಭಾಂಗಣ, ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4 ಇಲ್ಲಿ ತೆರೆಯಲಾಗುವುದು. ಟೆಂಡರ್ ದಾಖಲೆಗಳನ್ನು ಹಸ್ತಾಂತರಗೊಳಿಸಬಾರದು.

ಪಿ.ಆರ್. 742

ತೋಟಗಾರಿಕೆ ನಿರ್ದೇಶಕರು,
ಲಾಲ್‌ಬಾಗ್, ಬೆಂಗಳೂರು

## ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ಸಾಮಾಜಿಕ ಅರಣ್ಯ ವಿಭಾಗ, ಬೆಂಗಳೂರು
## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

2003-04ನೇ ಸಾಲಿನಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ಸಾಮಾಜಿಕ ಅರಣ್ಯ ವಿಭಾಗ ಬೆಂಗಳೂರು ಇಲ್ಲಿ ವಿವಿಧ ಜಾತಿಯ ಸಸಿಗಳನ್ನು ಬೆಳೆಸುವ ಸಲುವಾಗಿ 5"x 8" ಮತ್ತು 6"x 9" ಅಳತೆಯ ಎಲ್.ಡಿ.ಪಿ.ಇ ಪಾಲಿಥೀನ್ ಚೀಲಗಳ ಸರಬರಾಜಿಗಾಗಿ, ಅವರೇ ಸ್ವಂತ ಉತ್ಪಾದನಾ ಘಟಕಗಳನ್ನು ಹೊಂದಿರುವಂತಹ ಉತ್ಪಾದಕರಿಂದ ಮೊಹರಾದ ಲಕೋಟೆಯಲ್ಲಿ ಕಡಿಮೆ ದರದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

**ಅನುಸೂಚಿ-1**

| | | |
|---|---|---|
| 1. | ಟೆಂಡರ್ ಕರೆಯುವ ಸ್ಥಳ | ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ಸಾಮಾಜಿಕ ಅರಣ್ಯ ವಿಭಾಗ, ವನವಿಕಾಸ 5ನೇ ಮಹಡಿ, 18ನೇ ಕ್ರಾಸ್ ಮಲ್ಲೇಶ್ವರಂ, ಬೆಂಗಳೂರು-3 ಇವರ ಕಛೇರಿ |
| 2. | ಖಾಲಿ ಟೆಂಡರ್ ಫಾರ್ಮ್‌ಗಳನ್ನು ನೀಡುವ ದಿನಾಂಕ | 11.12.03 ಬೆಳಿಗ್ಗೆ 10.30 ರಿಂದ ಮಧ್ಯಾಹ್ನ 5.30 ಘಂಟೆಯವರೆಗೆ ಮಾತ್ರ. |
| 3. | ಟೆಂಡರ್ ಫಾರ್ಮ್ ಬೆಲೆ | ರೂ. 200/- ಪ್ರತಿ ಫಾರ್ಮಿಗೆ ಮತ್ತು ಪ್ರಚಲಿತ ಕರಗಳು |
| 4. | ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ಸಮಯ | 12.12.03 ಮಧ್ಯಾಹ್ನ 1.00 ಘಂಟೆವರೆಗೆ |
| 5. | ಟೆಂಡರ್‌ಗಳನ್ನು ತೆರೆಯುವ ದಿನಾಂಕ ಮತ್ತು ಸಮಯ | 12.12.03 ಮಧ್ಯಾಹ್ನ 5.00 ಘಂಟೆವರೆಗೆ |

**ಅನುಸೂಚಿ-2**

| ಯೂನಿಟ್ ಸಂಖ್ಯೆ | ತಾಲ್ಲೂಕು ವಲಯದ ಹೆಸರು | ಪಾಲಿಥೀನ್ ಚೀಲಗಳ ಸಂಖ್ಯೆ | ಪಾಲಿಥೀನ್ ಚೀಲಗಳು ತೂಕ ಕೆ.ಜಿ.ಗಳಲ್ಲಿ | ಒಟ್ಟು ಅಂದಾಜು ಮೌಲ್ಯ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ |
|---|---|---|---|---|---|
| 1 | 2 | 3 | 4 | 5 | 6 |
| 1. | ನೆಲಮಂಗಲ | 700000 | 225 | 18000.00 | 450.00 |
| 2. | ದೊಡ್ಡಬಳ್ಳಾಪುರ | 700000 | 225 | 18000.00 | 450.00 |
| 3. | ಹೊಸಕೋಟೆ | 800000 | 250 | 20000.00 | 500.00 |
| 4. | ದೇವನಹಳ್ಳಿ | 750000 | 230 | 18400.00 | 460.00 |
| 5. | ಚನ್ನಪಟ್ಟಣ | 750000 | 230 | 18400.00 | 460.00 |
| 6. | ರಾಮನಗರ | 750000 | 230 | 18400.00 | 460.00 |

| 1 | 2 | 3 | 4 | 5 | 6 |
|---|---|---|---|---|---|
| 7. | ಕನಕಪುರ | 800000 | 250 | 20000.00 | 500.00 |
| 8. | ಮಾಗಡಿ | 750000 | 230 | 18400.00 | 460.00 |

**ಟೆಂಡರಿನ ಷರತ್ತುಗಳು ಈ ಕೆಳಕಂಡಂತೆ ಇರುತ್ತವೆ.**

1. ಪ್ರತಿಯೊಂದು ಯುನಿಟ್‌ಗೆ ಪ್ರತ್ಯೇಕವಾಗಿ ಟೆಂಡರ್ ಸಲ್ಲಿಸಬೇಕಾಗುವುದು.
2. ಟೆಂಡರ್ ಸ್ವೀಕರಿಸುವ ಸಮಯವು ಈ ಕಛೇರಿಯ ಗಡಿಯಾರದ ಪ್ರಕಾರ ಇರುತ್ತದೆ.
3. ಟೆಂಡರನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ಸಾಮಾಜಿಕ ಅರಣ್ಯ ವಿಭಾಗ ಇವರು ಅಥವಾ ಇವರಿಂದ ನೇಮಿಸಲ್ಪಟ್ಟ ಯಾವುದೇ ಅಧಿಕಾರಿಯು ಟೆಂಡರನ್ನು ಸ್ವೀಕರಿಸುವರು/ನಡೆಸಿಕೊಡುವರು.
4. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣವನ್ನು ನೀಡದೇ ತಿರಸ್ಕರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಸಾಮಾಜಿಕ ಅರಣ್ಯ ವಿಭಾಗ, ಬೆಂಗಳೂರು ಇವರು ಕಾಯ್ದಿರಿಸಿಕೊಂಡಿದ್ದಾರೆ.
5. ಟೆಂಡರ್‌ಗೆ ಇಡಲಾದ ಸಾಮಗ್ರಿಯ ಪ್ರಮಾಣವನ್ನು ಯಾವುದೇ ಮುನ್ಸೂಚನೆ ಇಲ್ಲದೆ ಬದಲಿಸಬಹುದು.
6. ಟೆಂಡರಿನ ದಿನಾಂಕ ಹಾಗೂ ಸಮಯವನ್ನು ಯಾವುದೇ ಮುನ್ಸೂಚನೆ ಇಲ್ಲದೆ ಹಾಗೂ ಯಾವುದೇ ಕಾರಣ ನೀಡದೇ ಬದಲಾಯಿಸಬಹುದು.
7. ಟೆಂಡರು ಕರೆಯಲಾದ ಸಾಮಗ್ರಿಗಳನ್ನು ಸ್ವತಃ ಉತ್ಪಾದಿಸುವ ಘಟಕಗಳನ್ನು ಹೊಂದಿದವರು ಮಾತ್ರ ಈ ಟೆಂಡರಿನಲ್ಲಿ ಭಾಗವಹಿಸತಕ್ಕದ್ದು ಅಂತಹ ಉತ್ಪಾದನಾ ಘಟಕಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಬೆಂಗಳೂರು ಗ್ರಾಮಾಂತರ ಸಾಮಾಜಿಕ ಅರಣ್ಯ ವಿಭಾಗ, ಬೆಂಗಳೂರು ಇವರಿಂದ ಅಧಿಕಾರ ಪಡೆದ ಯಾರೇ ಅಧಿಕಾರಿಗಳಾಗಲೀ ಸ್ವತಃ ಪರಿಶೀಲಿಸಬಹುದು.
8. ಸದರಿ ಉತ್ಪಾದನಾ ಘಟಕಗಳು, ವಾಣಿಜ್ಯ ಹಾಗೂ ಕೈಗಾರಿಕೆ ಇಲಾಖೆಯ ನಿಯಮಗಳಡಿಯಲ್ಲಿ ನೊಂದಾಯಿತ ಘಟಕಗಳಾಗಿರಬೇಕು. ಹಾಗೂ ಆ ರೀತಿ ನೊಂದಾಯಿಸಲ್ಪಟ್ಟ ಸರ್ಟಿಫಿಕೇಟಿನ ಪ್ರತಿಯನ್ನು ಟೆಂಡರ್ ಫಾರ್ಮ್ ಜೊತೆ ಲಗತ್ತಿಸಿರಬೇಕು.
9. ಟೆಂಡರ್ ಕರೆಯಲಾದ ಉತ್ಪನ್ನಗಳ ಗುಣಮಟ್ಟವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಅಥವಾ ಗುಣಮಟ್ಟ ನಿಯಂತ್ರಣ ಪ್ರಾಧಿಕಾರವು ತಿರಸ್ಕರಿಸಿದರೆ ಅಂತಹ ಟೆಂಡರ್‌ದಾರರ ಟೆಂಡರನ್ನು/ಟೆಂಡರ್ ಮಂಜೂರಾತಿ ಆದೇಶವನ್ನು ರದ್ದುಪಡಿಸಲಾಗುವುದು ಹಾಗೂ ಈ ಬಗ್ಗೆ ಇಡಲಾದ ಭದ್ರತಾ ಠೇವಣಿ ಹಾಗೂ ಇ.ಎಂ.ಡಿ.ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
10. ಯಶಸ್ವಿ ಟೆಂಡರ್‌ದಾರರ ಸರಬರಾಜು ಮಾಡುವ ಸರಕುಗಳ ಗುಣಮಟ್ಟ ಪರಿಶೀಲನೆಗೆ ಸಂಬಂಧಿಸಿದಂತೆ ತಗಲುವ (Service Charges) ವೆಚ್ಚವನ್ನು ತಾವೇ ಸ್ವತಃ ಭರಿಸಬೇಕಾಗುವುದು.
11. ಟೆಂಡರನ್ನು ನಿಗದಿತ ಫಾರ್ಮಿನಲ್ಲಿ ಸಲ್ಲಿಸುವುದು.
12. ಟೆಂಡರ್ ಸಲ್ಲಿಸುವ ಸರಬರಾಜುದಾರರು ಆಯಾಯ ವಲಯದ ಮುಂದೆ ಸೂಚಿಸಿದ ಮೊತ್ತದ ಇಡಿಗಂಟನ್ನು ಆಯಾಯ ವಲಯಗಳಿಗೆ ಪ್ರತ್ಯೇಕವಾಗಿ ಟೆಂಡರ್‌ನೊಂದಿಗೆ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಹುಂಡಿ (ಡಿ.ಡಿ)ಯ ಮೂಲಕ ಲಗತ್ತಿಸಬೇಕು.
13. ಇನ್‌ಕಮ್‌ಟ್ಯಾಕ್ಸ್ ಹಾಗೂ ಸೇಲ್ಸ್‌ಟ್ಯಾಕ್ಸ್ ಕ್ಲಿಯರೆನ್ಸ್ ಸರ್ಟಿಫಿಕೇಟ್‌ಗಳನ್ನು ಟೆಂಡರ್ ಫಾರ್ಮ್ ಜೊತೆಗೆ ಲಗತ್ತಿಸಬೇಕು. ಇಲ್ಲವೇ ಯಶಸ್ವಿ ಟೆಂಡರ್‌ದಾರರು ಕರಾರುನಾಮೆಗೆ ಸಹಿ ಮಾಡುವ ಸಮಯದಲ್ಲಿ ತಪ್ಪದೇ ಹಾಜರುಪಡಿಸಬೇಕು.
14. ಯಶಸ್ವಿ ಟೆಂಡರುದಾರರು ಬ್ಯಾಗುಗಳನ್ನು ಈ ಕಛೇರಿಯಿಂದ ಮಾಡಲಾದ ಹಂಚಿಕೆಯ ಪ್ರಕಾರ ಆಯಾ ವಲಯ ಕಛೇರಿಗೆ ತಮ್ಮ ಸ್ವಂತ ವೆಚ್ಚದಲ್ಲಿ ತಲುಪಿಸಿಕೊಡಬೇಕು.
15. ಈ ಕಛೇರಿಯಿಂದ ಯಾವುದೇ ಕಚ್ಚಾ ಸಾಮಗ್ರಿ ಅಥವಾ ಮುಂಗಡ ಹಣ ನೀಡಲಾಗುವುದಿಲ್ಲ. ಹಾಗೂ ಸರಬರಾಜು ಅವಧಿಯನ್ನು ಯಾವುದೇ ಕಾರಣಕ್ಕೂ ವಿಸ್ತರಿಸಲಾಗುವುದಿಲ್ಲ.
16. ಯಶಸ್ವಿ ಟೆಂಡರುದಾರರು ಸರಬರಾಜು ಆದೇಶ ನೀಡಿದ 7 (ಏಳು) ದಿನಗಳಲ್ಲಿ ಈ ಕಛೇರಿಯಿಂದ ಮಾಡಿದ ಹಂಚಿಕೆಯ ಪ್ರಕಾರ ಆಯಾ ವಲಯ ಕಛೇರಿಗಳಿಗೆ ಸರಕನ್ನು ತಲುಪಿಸತಕ್ಕದ್ದು.
17. ಮಾಲಿನ ಸರಬರಾಜು ನಂತರ ಅದರ ಗುಣಮಟ್ಟ ಖಾತ್ರಿ ಪಡಿಸಿಕೊಂಡ ನಂತರ ಅನುದಾನದ ಲಭ್ಯತೆಯನ್ನು ಅನುಸರಿಸಿ ಬಿಲ್ ಪಾವತಿ ಮಾಡಲಾಗುವುದು. ಅನುದಾನ ಲಭ್ಯತೆ ತಡವಾದಲ್ಲಿ ಪಾವತಿ ಬಗ್ಗೆ ಯಾವುದೇ ತಕರಾರು ನಡೆಯತಕ್ಕದ್ದಲ್ಲ.
18. ಸರಬರಾಜುದಾರರು ತಮ್ಮ ಉತ್ಪಾದನಾ ಘಟಕದ ಹೆಸರು, ಗುಣಮಟ್ಟ ಇತ್ಯಾದಿಗಳನ್ನು ಪರಿಶೀಲಿಸುವ ಸಲುವಾಗಿ ತಾವು ಉತ್ಪಾದಿಸಿ ಸರಬರಾಜು ಮಾಡುವ ಸರಕಿನ ಸ್ಯಾಂಪಲ್‌ಗಳನ್ನು ಟೆಂಡರ್ ಹಾಕುವ ಮೊದಲು ಈ ಕಛೇರಿಗೆ ಸಲ್ಲಿಸಬೇಕು.
19. ಯಶಸ್ವಿ ಟೆಂಡರ್‌ದಾರರು ರೂ.100/- ಮುಖ ಬೆಲೆಯ ಸ್ಟಾಂಪ್ ಪೇಪರ್ ಮೇಲೆ ಟೆಂಡರ್ ನಿಯಮಾವಳಿಗನುಸಾರವಾಗಿ ಸರಕು ಸರಬರಾಜು ಮಾಡುವ ಬಗ್ಗೆ ಈ ಕೆಳಗೆ ಸಹಿ ಮಾಡಿದವರೊಂದಿಗೆ ಕರಾರು ಮಾಡಿಕೊಳ್ಳಬೇಕು.
20. ಸದರಿ ಪ್ರಕ್ರಿಯೆಯಲ್ಲಿ ಭಾಗವಹಿಸುವವರು ಈ ಮುಂಚೆ ಯಾವುದೇ ಇಲಾಖೆಯಿಂದ ಬ್ಲಾಕ್ ಲಿಸ್ಟೆಡ್ ಅಥವಾ ತಪಿತಸ್ಥರಾಗಿರಬಾರದು.

21. ಈ ಮೇಲಿನ ಷರತ್ತುಗಳಲ್ಲದೆ ಹೆಚ್ಚುವರಿ ಅಗತ್ಯವೆನಿಸಿದ ಷರತ್ತುಗಳನ್ನು ಟೆಂಡರ್ ಸಮಯದಲ್ಲಿ ಓದಿ ಹೇಳಲಾಗುವುದು.
22. ಈ ಬಗ್ಗೆ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕಛೇರಿಯ ಕೆಲಸದ ವೇಳೆಯಲ್ಲಿ ಈ ಕಛೇರಿಯನ್ನು ಸಂಪರ್ಕಿಸಬಹುದಾಗಿದೆ.
23. ದಿನಾಂಕ 12.12.03 ರಂದು ಇಡಲಾದ ಟೆಂಡರ್ ಕಾರಾಣಾಂತರದಿಂದ ನಿರಾಕರಿಸಲ್ಪಟ್ಟಲ್ಲಿ ಮುಂದಿನ ದಿನಾಂಕ 15.12.03 ರಂದು ಮರು ಟೆಂಡರನ್ನು ಇಡಲಾಗುವುದು.
24. ಕೆ.ಎಸ್.ಎಫ್.ಐ.ಸಿ. ನಿರ್ದಿಷ್ಟ ಮಾನದಂತೆ 5x8 ಅಳತೆ ಚೀಲ 240 ಗೇಜ್ ಪ್ರಕಾರ ಪ್ರತಿ ಕೆಜಿಗೆ 330 ಪಾಲಿಥೀನ್ ಚೀಲ ಕಡ್ಡಾಯವಾಗಿ ಬರಬೇಕು. ಚೀಲಗಳ ಸಂಖ್ಯೆಯಲ್ಲಿ ಕಡಿಮೆ ಬಂದರೆ ಕಡಿಮೆ ಬಂದಷ್ಟು ಚೀಲಗಳನ್ನು ಟೆಂಡರ್‌ದಾರರೇ ಅವರ ಸ್ವಂತ ಜವಾಬ್ದಾರಿ ಮೇರೆಗೆ ಸರಬರಾಜು ಮಾಡಬೇಕಾಗುತ್ತದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 745 ಗ್ರಾಮಾಂತರ ಸಾಮಾಜಿಕ ಅರಣ್ಯ ವಿಭಾಗ , ಬೆಂಗಳೂರು.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿರಸಿ ಹಾಗೂ ಸದಸ್ಯ ಕಾರ್ಯದರ್ಶಿ, ಅರಣ್ಯ ಅಭಿವೃದ್ಧಿ ಏಜೆನ್ಸಿ, ಶಿರಸಿ (ಉ.ಕ.) ಇವರ ಕಛೇರಿ

**ಕ್ರ. ಸಂ. ಎ2-ಎನ್.ಎ.ಪಿ-ವಿವ-44/03-04**

**ಅಲ್ಪಾವಧಿ ಸಂಕ್ಷಿಪ್ತ ಟೆಂಡರು ಪ್ರಕಟಣೆ ದಿನಾಂಕ: 13ನೇ ನವೆಂಬರ್ 2003**

ಶಿರಸಿ ವಿಭಾಗ ವ್ಯಾಪ್ತಿಯಲ್ಲಿ ನೆಡುತೋಪುಗಳಿಗೆ ಬೇಲಿ ಮಾಡುವ ಸಲುವಾಗಿ ಮುಳ್ಳು ತಂತಿ ಪೂರೈಸುವ ಕುರಿತು.

ಈ ಮೂಲಕ ಸಾರ್ವಜನಿಕರಿಗೆ ಪ್ರಚುರಪಡಿಸುವುದೇನೆಂದರೆ, 2003-04ನೇ ಸಾಲಿಗೆ ವಿಭಾಗ ವ್ಯಾಪ್ತಿಯಲ್ಲಿ ಕೈಗೊಳ್ಳುವ ಯೋಜನೆ ಶೀರ್ಷಿಕೆಗಳ ಅರಣ್ಯೀಕರಣ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ನೆಡುತೋಪುಗಳು ಮತ್ತಿತರ ಅರಣ್ಯ ಪ್ರದೇಶಗಳಲ್ಲಿ ಬೇಲಿ ಮಾಡುವ ಉದ್ದೇಶಕ್ಕಾಗಿ 12x12 ಗೇಜಿನ ಟಾಟಾ ಸ್ಪೆಷಲ್ ಹಾಟ್ ಡಿಪ್ಡ್ ಜಿಂಕ್ ಕೋಟೆಡ್ ಮುಳ್ಳು ತಂತಿಯನ್ನು ಪೂರೈಸಲು ಈ ವಿಭಾಗದಲ್ಲಿ 2003-04ನೇ ಸಾಲಿಗೆ ನೋಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್ ಫಾರ್ಮ್‌ಗಳನ್ನು ನಿಗದಿತ ನಮೂನೆಯಲ್ಲಿ ದಿನಾಂಕ: 10.12.2003 ರಂದು ಮಧ್ಯಾಹ್ನ 3:00ಘಂಟೆಯವರೆಗೆ ಈ ಕೆಳ ಸಹಿದಾರರ ವಿಳಾಸಕ್ಕೆ ಮೊಹರಾದ ಲಕೋಟೆಗಳಲ್ಲಿ ಸಲ್ಲಿಸಬೇಕು. ಟೆಂಡರನ್ನು ಸದರಿ ದಿನಾಂಕದಂದು 4:00 ಘಂಟೆಗೆ ಈ ಕೆಳಸಹಿದಾರರು ಅಥವಾ ಅವರಿಂದ ಅಧಿಕೃತರಾದ ಅಧಿಕಾರಿಗಳು ಹಾಜರಿದ್ದ ಅರಣ್ಯ ಗುತ್ತಿಗೆದಾರರ ಸಮಕ್ಷಮ ತೆರೆಯಲಾಗುವುದು.

**ಷೆಡ್ಯೂಲ್**

| ಕ್ರ. ಸಂ. | ಸಾಮಗ್ರಿ ವಿವರ | ಅಂದಾಜು ಪ್ರಮಾಣ | ಅಂದಾಜು ಮೊತ್ತ | ಇ.ಎಂ.ಡಿ ಮೊತ್ತ | ಸಾಮಗ್ರಿ ಪೂರೈಸಬೇಕಾದ ಅವಧಿ |
|---|---|---|---|---|---|
| 1 | 12x12 ಗೇಜಿನ ಟಾಟಾ ಸ್ಪೆಷಲ್ ಹಾಟ್ ಡಿಪ್ ಜಿಂಕ್ ಕೋಟೆಡ್ ಮುಳ್ಳು ತಂತಿ | 6,740 ಕೆ.ಜಿ. | ರೂ.3,37,000.00 | ರೂ.8,425.00 | 28.02.2004 |

**ನಿಬಂಧನೆಗಳು:**

1. ಟೆಂಡರ್ ಫಾರಂನ್ನು ರೂ.200.00 ಮತ್ತು ತೆರಿಗೆ ಪಾವತಿ ಮಾಡಿ ಹರಾಜಿನ ದಿನ ಮಧ್ಯಾಹ್ನ 1:00 ಘಂಟೆಯ ಒಳಗಾಗಿ ಈ ಕಛೇರಿಯಲ್ಲಿ ಪಡೆಯಬಹುದು.

1 (ಅ) ದರವನ್ನು ಎಲ್ಲಾ ತೆರಿಗೆಗಳು ಸೇರಿ ಟನ್ ಒಂದಕ್ಕೆ ಎಷ್ಟು ಎಂದು ನಮೂದಿಸತಕ್ಕದ್ದು.

2. ಟೆಂಡರ್‌ದಾರರು ಇ.ಎಂ.ಡಿ. ಮೊತ್ತವನ್ನು ರಾಷ್ಟ್ರೀಕೃತ ಬ್ಯಾಂಕ್‌ನ ಡಿ.ಡಿ.ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿರಸಿ ವಿಭಾಗ, ಶಿರಸಿ ರವರಿಗೆ ತೆಗೆದು ಟೆಂಡರು ಫಾರಂಗೆ ಲಗತ್ತಿಸಬೇಕು. ಇ.ಎಂ.ಡಿ. ಲಗತ್ತು ಇಲ್ಲದ ಟೆಂಡರು ತಿರಸ್ಕೃತವಾಗುವುದು.

3. ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರಮಾಣವು ಅಂದಾಜು ಆಗಿದ್ದು ಹೆಚ್ಚು ಅಥವಾ ಕಡಿಮೆ ಆಗಬಹುದು. ಹಾಗೂ ಸಾಮಗ್ರಿಗಳಿಗೆ ಆಯಾ ಶೀರ್ಷಿಕೆಗಳಡಿ ಬಿಡುಗಡೆಯಾಗುವ ಅನುದಾನದ ಮಿತಿಯಲ್ಲಿ ಹಣಪಾವತಿಸಲಾಗುವುದು.

4. ಸಾಮಗ್ರಿಗಳ ಗುಣಮಟ್ಟ ಮತ್ತು ಪ್ರಮಾಣ ಪರಿಶೀಲಿಸಿ ಹಣ ಪಾವತಿಸಲಾಗುವುದು.

5. ಟಾಟಾ ಕಂಪನಿಯಿಂದ ಮುಳ್ಳುತಂತಿ ತಯಾರಿಸಲು ಅಗತ್ಯವಿರುವ ಕಚ್ಚಾಸಾಮಗ್ರಿ ಪಡೆದ ಬಗ್ಗೆ ಇನ್‌ವಾಯ್ಸ್ / ಪ್ರಮಾಣಪತ್ರದ ಪ್ರತಿಯನ್ನು ಬಿಲ್ಲಿಗೆ ಲಗತ್ತಿಸಿರಬೇಕು.

6. ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆದುಕೊಳ್ಳಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿರಸಿ ಹಾಗೂ ಸದಸ್ಯ
ಪಿ.ಆರ್. 746 ಕಾರ್ಯದರ್ಶಿ, ಅರಣ್ಯ ಅಭಿವೃದ್ಧಿ ಏಜೆನ್ಸಿ, ಶಿರಸಿ (ಉ.ಕ.)

## ಕರ್ನಾಟಕ ಮೃಗಾಲಯ ಪ್ರಾಧಿಕಾರ

## ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು - 83

**ಸಂಕ್ಷಿಪ್ತ ಟೆಂಡರು ಪ್ರಕಟಣೆ**

**ಸಂಖ್ಯೆ: ಎ1-ಬಿಎಫ್‌ಎಫ್-4/2003-2004, ದಿನಾಂಕ: 12ನೇ ನವೆಂಬರ್ 2003**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಕಾಮಗಾರಿಗಳಿಗೆ ದಿನಾಂಕ: 18.12.2003 ರಂದು ಮಧ್ಯಾಹ್ನ 3.00 ಘಂಟೆಯವರೆಗೆ ಮೊಹರು ಮಾಡಿದ ಲಕೋಟೆಯಲ್ಲಿ ಈ ಕಛೇರಿಯಲ್ಲಿ ನೊಂದಾಯಿಸಿದ ಗುತ್ತಿಗೆದಾರರಿಂದ ಟೆಂಡರುಗಳನ್ನು ಆಹ್ವಾನಿಸಲಾಗಿದೆ.

ಷೆಡ್ಯೂಲ್

| ಯೂನಿಟ್ ಸಂಖ್ಯೆ | ಕಾಮಗಾರಿಯ ವಿವರ | ಟೆಂಡರಿನ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. (ರೂ.ಗಳಲ್ಲಿ) | ಕೆಲಸ ಪೂರ್ಣಗೊಳಿಸಲು ಅವಧಿ |
|---|---|---|---|---|
| 1. | ಬಿ.ಎಫ್.ಎಫ್. ಟೈಗರ್ ಫೆಸಿಲಿಟಿಯಲ್ಲಿರುವ ಕ್ರಾಲ್ ಏರಿಯಾದ ಪಾರ್ಟಿಶಿಯನ್‌ಗೆ ಚೈನ್‌ಲಿಂಕ್ ಮೆಶ್ ಫೆನ್ಸನ್ನು ಒದಗಿಸಿ ಅಳವಡಿಸುವುದು. | 3.69 | 9500/- | ಕೆಲಸದ ಆದೇಶದಿಂದ 1 ತಿಂಗಳೊಳಗೆ. |

ಷರತ್ತುಗಳು:

1. ಗುತ್ತಿಗೆದಾರರು ಪ್ರತಿ ಯೂನಿಟ್‌ಗೆ ರೂ. 200-/- ಮತ್ತು ತೆರಿಗೆಗಳ ಪ್ರತ್ಯೇಕದ ಟೆಂಡರ್ ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: 15.12.2003 ರಿಂದ 18.12.2003 ರ ಮಧ್ಯಾಹ್ನ 12.00 ಘಂಟೆಯವರೆಗೆ ಪಡೆಯಬಹುದು.
2. ಇನ್ನೂ ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ
ಪಿ.ಆರ್. 747 ಬಯಲಾಜಿಕಲ್ ಪಾರ್ಕ್, ಬೆಂಗಳೂರು-83

## ಕರ್ನಾಟಕ ಮೃಗಾಲಯ ಪ್ರಾಧಿಕಾರ

## ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು - 83

### ಸಂಕ್ಷಿಪ್ತ ಟೆಂಡರು ಪ್ರಕಟಣೆ

**ಸಂಖ್ಯೆ: ಎ1-ಬಿಬಿಪಿ-ಸಿಆರ್-26/2003-2004, ದಿನಾಂಕ: 12ನೇ ನವೆಂಬರ್ 2003**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವಂತೆ ಪ್ರೊಜೆಕ್ಟರ್ ಸಿಸ್ಟಂ (ಡಿಎಲ್‌ಪಿ) ಸರಬರಾಜು ಮಾಡುವ ಬಗ್ಗೆ ದಿನಾಂಕ: 17.12.2003 ರಂದು ಮಧ್ಯಾಹ್ನ 3.00 ಘಂಟೆಯವರೆಗೆ ಮೊಹರು ಮಾಡಿದ ಲಕೋಟೆಯಲ್ಲಿ ಈ ಕಛೇರಿಯಲ್ಲಿ ವಿವಿಧ ಸಂಸ್ಥೆ/ ಕಂಪನಿಗಳಿಂದ ಟೆಂಡರುಗಳನ್ನು ಆಹ್ವಾನಿಸಲಾಗಿದೆ.

ಷೆಡ್ಯೂಲ್

| ಕ್ರ. ಸಂ. | ಸರಬರಾಜಿನ ವಿವರ | ಟೆಂಡರಿನ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ. (ರೂ.ಗಳಲ್ಲಿ) |
|---|---|---|---|
| 1. | ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್‌ನ ಆಡಿಟೋರಿಯಂಗೆ ಒಂದು ಡಿ.ಎಲ್.ಪಿ. ಪ್ರೊಜೆಕ್ಟರ್ ಸಿಸ್ಟಮ್ ಸರಬರಾಜು ಮಾಡಿ ಅಳವಡಿಸುವುದು. | 2.50 | 6,500/- |

ಷರತ್ತುಗಳು:

1. ರೂ. 200/- ಮತ್ತು ತೆರಿಗೆಗಳ ಪ್ರತ್ಯೇಕದ ಟೆಂಡರ್ ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: 13.12.2003 ರಿಂದ 17.12.2003 ರ ಮಧ್ಯಾಹ್ನ 12.00 ಘಂಟೆಯವರೆಗೆ ಪಡೆಯಬಹುದು.
2. ಇನ್ನೂ ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ
ಪಿ.ಆರ್. 748 ಬಯಲಾಜಿಕಲ್ ಪಾರ್ಕ್, ಬೆಂಗಳೂರು-83

**FORM IV**
**(See Rule 12)**
**NOTICE**

It is hereby notified that the undersigned has changed his/her name from **RAMA** to **RAMU.**

P.D. 163 **RAMU**

**FORM IV**
**(See Rule 12)**
**NOTICE**

It is hereby notified that the undersigned has changed his/her name from **ISHVARAGOUDA RAYANAGOUDA KOLLI** to **ISHVARAGOUDA RAYANAGOUDA HARTI**

P.D. 162 **ISHVARAGOUDA RAYANAGOUDA HARTI**

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು (ಪ್ರಾದೇಶಿಕ) ರವರ ಕಛೇರಿ, ಚಿತ್ರದುರ್ಗ

### ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಎ6/ರಸ್ತೆ ಬದಿ.ಸಿಆರ್-38/2001-02, ದಿನಾಂಕ: 13ನೇ ನವೆಂಬರ್ 2003**

**ವಿಷಯ:** ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ವಿಶ್ವ ಬ್ಯಾಂಕ್ ಸಹಕಾರಿ) ಹಂತ-2ರಲ್ಲಿ ರಸ್ತೆಗಳ ಅಗಲೀಕರಣಕ್ಕೆ ಸಂಬಂಧಿಸಿದಂತೆ ಕಾರಿಡಾರ್ ಆಫ್ ಇಂಪ್ಯಾಕ್ಟ್‌ನ ಒಳಗಡೆ ಬರುವ ಮರಗಳನ್ನು ವಿಲೇ ಮಾಡಿಕೊಡಲು ಬಹಿರಂಗ ಹರಾಜು ಪ್ರಕಟಣೆ ಹೊರಡಿಸುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಚಿತ್ರದುರ್ಗ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಬರುವ ಹಿರಿಯೂರು-ಬಳ್ಳಾರಿ ರಾಜ್ಯ ಹೆದ್ದಾರಿ ಅಗಲೀಕರಣಕ್ಕೆ ಸಂಬಂಧಿಸಿದಂತೆ ಚಳ್ಳಕೆರೆ ಪಟ್ಟಣದಿಂದ 0 ಕಿ.ಮೀ ಎಂದು ಪರಿಗಣಿಸಿ ಕಿ.ಮೀ 0 ರಿಂದ 30 ರವರೆಗಿನ ರಸ್ತೆಯ ಅಗಲೀಕರಣದೊಳಗೆ ಬರುವ ಕಾರಿಡಾರ್ ಆಫ್ ಇಂಪ್ಯಾಕ್ಟ್‌ನಲ್ಲಿ ಬೆಳೆದು ನಿಂತಿರುವ ವಿವಿಧ ಜಾತಿಯ ಮರಗಳನ್ನು ವಿಲೇವಾರಿ ಮಾಡಲು ದಿನಾಂಕ 26.12.2003 ರಂದು ಚಳ್ಳಕೆರೆ ವಲಯದಲ್ಲಿ ಬಹಿರಂಗ ಹರಾಜುಮಾಡಲು ನಿಗದಿಪಡಿಸಲಾಗಿದೆ.

ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಾಗಲಿ ಅಥವಾ ಅವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟ ಅಧಿಕಾರಿಗಳಾಗಲಿ ಈ ಕೆಳಗೆ ನಮೂದಿಸಿರುವ ಷರತ್ತಿಗೊಳಪಟ್ಟು ಬಹಿರಂಗ ಹರಾಜು ನಡೆಸಲಾಗುವುದು. ಇಚ್ಛೆಯುಳ್ಳವರು ಈ ಹರಾಜಿನಲ್ಲಿ ಭಾಗವಹಿಸುವುದು. ಸದರಿ ಬಹಿರಂಗ ಹರಾಜನ್ನು ಅನುಸೂಚಿಯಲ್ಲಿ ನಮೂದಿಸಿರುವ ಸ್ಥಳದಲ್ಲಿ ಮೇಲ್ಕಂಡ ದಿನಾಂಕದಂದು ನಡೆಸಲಾಗುವುದು.

ದಿನಾಂಕ 26.12.2003 ರಂದು ಚಳ್ಳಕೆರೆ ವಲಯದಲ್ಲಿ ನಡೆಸುವ ಬಹಿರಂಗ ಹರಾಜಿನಲ್ಲಿ ಬಿಡ್‌ದಾರರು ಭಾಗವಹಿಸದೆ ಇದ್ದಲ್ಲಿ ಅಥವಾ ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಮರು ಹರಾಜನ್ನು ದಿನಾಂಕ 2.1.2004 ರಂದು ನಡೆಸಲಾಗುವುದು. ನಂತರದ ಎರಡನೆಯ ಮರು ಹರಾಜನ್ನು ದಿನಾಂಕ 9.1.2004 ರಂದು ನಡೆಸಲಾಗುವುದು. ಈ ಹರಾಜುಗಳಿಗಾಗಿ ಪುನಃ ಯಾವುದೇ ರೀತಿಯ ಪ್ರಕಟಣೆ ಹೊರಡಿಸಲಾಗುವುದಿಲ್ಲ.

| ರಸ್ತೆಯ ಹೆಸರು | ಯುನಿಟ್ ಸಂಖ್ಯೆ | ಕಿ. ಮೀ | ಮರಗಳ ಸಂಖ್ಯೆ | ಅಂದಾಜು ಉತ್ಪನ್ನ ಪ್ರಮಾಣ | | ಬಹಿರಂಗ ಹರಾಜು ಮಾಡುವ ಸ್ಥಳ/ವೇಳೆ |
|---|---|---|---|---|---|---|
| | | | | ಟಿಂಬರ್ (ಕ್ಯೂ.ಮೀ) | ಉರುವಲು (ಟನ್) | |
| 1 | 2 | 3 | 4 | 5 | 6 | 7 |
| ಚಳ್ಳಕೆರೆ-ಬಳ್ಳಾರಿ | 01 | 00-01 | 37 | - | 42.250 | ವಲಯ ಅರಣ್ಯಾಧಿಕಾರಿ ಚಳ್ಳಕೆರೆ ವಲಯದ ಕಾರ್ಯಾಲಯದಲ್ಲಿ ದಿನಾಂಕ 29-12-2003 ರಂದು ಮಧ್ಯಾಹ್ನ 3-00 ಗಂಟೆಗೆ ಬಹಿರಂಗ ಹರಾಜು ನಡೆಸಲಾಗುವುದು. |
| | 02 | 01-02 | 39 | - | 23.900 | |
| | 03 | 02-03 | 36 | - | 49.200 | |
| | 04 | 03-04 | 60 | - | 37.950 | |
| | 05 | 04-05 | 51 | - | 40.400 | |
| | 06 | 05-06 | 26 | 2.5 | 26.100 | |
| | 07 | 06-07 | 60 | - | 42.250 | |
| | 08 | 07-08 | 90 | - | 46.100 | |
| | 09 | 08-09 | 133 | - | 67.900 | |
| | 10 | 09-10 | 79 | - | 59.700 | |
| | 11 | 10-11 | 85 | - | 54.950 | |
| | 12 | 11-12 | 72 | - | 42.200 | |
| | 13 | 12-13 | 52 | - | 34.900 | |
| | 14 | 13-14 | 43 | - | 39.400 | |
| | 15 | 14-15 | 56 | 5.28 | 39.600 | |
| | 16 | 15-16 | 42 | 9.00 | 39.500 | |
| | 17 | 16-18 | 60 | - | 46.00 | |
| | 18 | 18-19 | 66 | - | 44.000 | |
| | 19 | 19-20 | 65 | - | 80.700 | |
| | 20 | 20-23 | 25 | 0.90 | 32.600 | |
| | 21 | 23-24 | 37 | 2.5 | 52.900 | |
| | 22 | 24-30 | 29 | 2.9 | 40.585 | |
| | | **ಒಟ್ಟು** | **1233** | **23.80** | **983.085** | |

**ಷರತ್ತುಗಳು:**

1) ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ರೂ.5000/- ಗಳ ಇ.ಎಂ.ಡಿ. ಮೊತ್ತವನ್ನು ಠೇವಣಿಯಾಗಿಡತಕ್ಕದ್ದು.
2) ಹರಾಜುದಾರರು ಬಹಿರಂಗ ಹರಾಜಿನ ಷರತ್ತುಗಳನ್ನು ಒಪ್ಪಿಕೊಂಡು ಸವಿಸ್ತಾರ ಬಹಿರಂಗ ಹರಾಜು ಪ್ರಕಟಣೆಯಲ್ಲಿ ಸಹಿ ಹಾಕದ ಹೊರತು ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.
3) ಯಶಸ್ವಿಯಾಗದ ಬಿಡ್‌ದಾರರು ಇಟ್ಟ ಠೇವಣಿ ಹಣವನ್ನು ಹರಾಜು ಮುಗಿದ ನಂತರ ಆ ದಿನವೇ ಹಿಂತಿರುಗಿಸಿ ಕೊಡಲಾಗುವುದು.

4) ಮರಗಳನ್ನು ಹರಾಜಿಗೆ ಇಟ್ಟಿರುವ ಪರಿಮಾಣವು ಹೆಚ್ಚು ಕಡಿಮೆ ವ್ಯತ್ಯಾಸವಾಗಬಹುದು ಅಂತಹುದಕ್ಕೆ ಯಾವುದೇ ರೀತಿಯ ದೂರುಗಳನ್ನು ಮಾನ್ಯ ಮಾಡುವುದಿಲ್ಲ.
5) ಯಶಸ್ವಿ ಬಿಡ್‌ದಾರರು ಬಿಡ್ ಮುಗಿದ ತಕ್ಷಣ ಖರೀದಿಸಿದ ಯುನಿಟ್‌ಗಳ ಮೊತ್ತದ ಶೇಕಡ 50 ರಷ್ಟು ಹಣ ಹಾಗೂ ಪೂರ್ಣ ತೆರಿಗೆಗಳನ್ನು ಅದೇ ದಿನ ಪಾವತಿಸಬೇಕು. ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜುದಾರರ ಜವಾಬ್ದಾರಿ ಮೇಲೆ ಮರು ಹರಾಜು ಮಾಡಲಾಗುವುದು. ಮರ ಹರಾಜಿನಲ್ಲಿ ಮೊದಲನೇ ಬಿಡ್‌ಗಿಂತ ಹಣ ಕಡಿಮೆ ಬಂದಲ್ಲಿ ಕಡಿಮೆಯಾದ ಹಣವನ್ನು ತಪ್ಪಿತಸ್ಥರಾದ ಮೊದಲನೇ ಯಶಸ್ವಿ ಬಿಡ್‌ದಾರರಿಂದ ಬಾಕಿ ಭೂ ಕಂದಾಯ ರೂಪದಲ್ಲಿ ಸೆಕ್ಷನ್-109 ರ ಪ್ರಕಾರ ವಸೂಲಿ ಮಾಡಲಾಗುವುದು. ಒಂದು ವೇಳೆ ಮರು ಹರಾಜಿನಲ್ಲಿ ಹೆಚ್ಚಿಗೆ ಹಣ ಬಂದಲ್ಲಿ ಮೊದಲನೇ ಯಶಸ್ವಿ ಬಿಡ್‌ದಾರರಿಗೆ ಈ ಹೆಚ್ಚಿಗೆ ಬಂದ ಹಣವನ್ನು ಕೇಳುವ ಅಧಿಕಾರವಿರುವುದಿಲ್ಲ.
6) ಯಶಸ್ವಿ ಬಿಡ್‌ದಾರರು ಬಹಿರಂಗ ಹರಾಜಿನ ದಿನವೇ ಹರಾಜು ಬೆಲೆಯ ಮೊತ್ತದಲ್ಲಿ ಶೇಕಡ 50 ರಷ್ಟನ್ನು ಮತ್ತು ಪೂರ್ಣ ತೆರಿಗೆಗಳನ್ನು ಪಾವತಿ ಮಾಡಿದ ನಂತರ ಉಳಿದ ಶೇಕಡ 50 ರಷ್ಟು ಮೊತ್ತವನ್ನು ಕರಾರು ಒಪ್ಪಂದ ಮಾಡಿಕೊಂಡು ಕಾರ್ಯಾದೇಶವನ್ನು ಪಡೆಯುವ ಮೊದಲು ಪಾವತಿಸತಕ್ಕದ್ದು.
7) ವರಮಾನ ತೆರಿಗೆಯನ್ನು ತೆರಿಗೆ ಸೆಕ್ಷನ್-216ಸಿ ಪ್ರಕಾರ ವಿಧಿಸಲಾಗುವುದು.
8) ಬಹಿರಂಗ ಹರಾಜಿನಲ್ಲಿ ಖರೀದಿಸಿದ ಮರಗಳನ್ನು ಸ್ವಂತ ಖರ್ಚಿನಿಂದ ನಿಯಮಾನುಸಾರ ಕಟಾವು ಮಾಡಿಕೊಂಡು ಸಾಗಿಸಿಕೊಳ್ಳುವುದು.
9) ಇಲಾಖೆಯಿಂದ ಪಟ್ಟಿ ಮಾಡಲ್ಪಟ್ಟಿರುವ ಮರಗಳ ಎಣಿಕೆಗಳನ್ನು ಮತ್ತು ವಿಂಗಡಣೆಗಳನ್ನು ಅಖೈರವಾಗಿ ಒಪ್ಪಿಕೊಳ್ಳತಕ್ಕದ್ದು. ಮಾರಾಟ ಮಾಡುವ ಮುನ್ನ ಖರೀದಿಸಲು ಇಷ್ಟಪಡುವವರು ಮರ ಮುಟ್ಟುಗಳ ಅಳತೆ, ಗುಣ, ಪರಿಮಾಣಗಳನ್ನು ಪರಿಶೀಲಿಸಿಕೊಳ್ಳಬಹುದು. ಅನಂತರ ಬರುವ ದೂರುಗಳನ್ನು ಸ್ವೀಕರಿಸುವುದಿಲ್ಲ.
10) ಮರಗಳು, ಎಲ್ಲಿ, ಯಾವ ಸ್ಥಿತಿಯಲ್ಲಿ ಇರುತ್ತವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು.
11) ಕಪ್ಪು ಪಟ್ಟಿಯಲ್ಲಿರುವವರು, ದಿವಾಳಿಯಾದವರು ಅಥವಾ ಬಾಕಿದಾರರು ಅಥವಾ ವಯಸ್ಕರಲ್ಲದವರು ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.
12) ಯಶಸ್ವಿ ಬಿಡ್‌ದಾರರು ಸ್ಥಿರೀಕರಣ ಆದೇಶ ಪಡೆದ ದಿನಾಂಕದಿಂದ ಒಂದು ತಿಂಗಳೊಳಗಾಗಿ ಇಲಾಖಾ ಅನುಮತಿಯನ್ನು ಪಡೆದುಕೊಂಡು ಮರಗಳನ್ನು ಅವರ ಸ್ವಂತ ಖರ್ಚಿನಲ್ಲಿ ಕಟಾವು ಮಾಡಿಕೊಂಡು ಹೋಗತಕ್ಕದ್ದು.
13) ಬಹಿರಂಗ ಹರಾಜಿನ ಸಂಬಂಧ ತಂಟೆ ತಕರಾರು ಏನಾದರೂ ಬಂದಲ್ಲಿ ಅದನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಸಂಪೂರ್ಣ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ಇವರಿಗೆ ಕಾಯ್ದಿರಿಸಲಾಗಿದೆ.
14) ಯಶಸ್ವಿ ಹರಾಜುದಾರರು ಖರೀದಿಸಲ್ಪಟ್ಟ ಮರಗಳನ್ನು ಕಟಾವು ಮಾಡಿ ಸಾಗಾಣೆ ಮಾಡಿಕೊಳ್ಳದೆ ಹಾಗೆಯೇ ಬಿಟ್ಟು ಅಕ್ರಮ ಕಡತಲೆ ಹಾಗೂ ಕಳ್ಳತನವಾದರೆ, ಬೆಂಕಿ ಮತ್ತು ಯಾವುದೇ ಪ್ರಕೃತಿಯಿಂದ ನಷ್ಟವಾದರೆ ಇಲಾಖೆ ಜವಾಬ್ದಾರಿಯಾಗಿರುವುದಿಲ್ಲ.
15) ಯಶಸ್ವಿ ಹರಾಜುದಾರರು ನಿಂತ ಮರಗಳನ್ನು ಕಟಾವಣೆ ಮಾಡುವಾಗ ಸಾರ್ವಜನಿಕ ಸೊತ್ತುಗಳಿಗೆ, ವಿದ್ಯುತ್ ಕಂಬಗಳಿಗೆ, ದೂರವಾಣಿ ಸಂಪರ್ಕಕ್ಕೆ, ವಾಹನ ಸಂಚಾರಕ್ಕೆ ಹಾಗೂ ಪ್ರಯಾಣಿಕರಿಗೆ ತೊಂದರೆಯಾಗದಂತೆ ನೋಡಿಕೊಳ್ಳತಕ್ಕದ್ದು. ಯಾವುದೇ ಅನಾಹುತಗಳು ಸಂಭವಿಸಿದಲ್ಲಿ ಯಶಸ್ವಿ ಹರಾಜುದಾರರೇ ಹೊಣೆಗಾರರಾಗಿರುತ್ತಾರೆ.
16) ಅನಿವಾರ್ಯ ಕಾರಣಗಳಿಂದ ತಡವಾಗಿ ಹರಾಜಿನಲ್ಲಿ ಭಾಗವಹಿಸಲು ಬಂದ ಬಿಡ್‌ದಾರರು ಹರಾಜು ನಡೆಸುವ ಅಧಿಕಾರಿಗಳ ಅನುಮತಿ ಪಡೆದು ಹರಾಜಿನಲ್ಲಿ ಇ.ಎಂ.ಡಿ ಹಣವನ್ನು ತುಂಬಿ ಭಾಗವಹಿಸಬಹುದು.
17) ಬಹಿರಂಗ ಹರಾಜಿನ ಸಮಯದಲ್ಲಿ ಅವಶ್ಯಕವಾಗಿ ಸೇರಿಸಬೇಕಾದಂತಹ ಯಾವುದೇ ಷರತ್ತುಗಳನ್ನು ಸೇರಿಸಬಹುದು ಮತ್ತು ಯಾವುದೇ ಅವಶ್ಯ ಬದಲಾವಣೆಗಳನ್ನು ಜಾರಿಗೆ ತರಲಾಗುವುದು. ಹರಾಜಿನ ಕಾಲದಲ್ಲಿ ಬದಲಾವಣೆಗಳನ್ನು ಓದಿ ಹೇಳಲಾಗುವುದು.
18) ಸರ್ಕಾರದ ಇತರೆ ಕಾನೂನು ಕಟ್ಟಳೆಗಳಿಗೆ ಬದ್ಧರಾಗಿರತಕ್ಕದ್ದು.

ಪಿ.ಆರ್. 749 ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

**OFFICE OF THE SUPERINTENDENT, CHIGATERI DISTRICT HOSPITAL, DAVANGERE**

**No.CGH:HMS-2/134:2003-2004, Dated: 28th October 2003**

**NOTIFICATION OF TENDER FOR SUPPLY OF MEDICAL EQUIPMENTS AND FURNITURES**

**TENDER DATE 10-12-2003**

| | |
|---|---|
| Date of Issue of Tender forms from | 15-11-2003 To - 09-12-2003 |
| Last Date to submit the filled up Tender forms on | 10-12-2003 1.00 PM |
| Date of opening of Bid (First Cover) | on 10-12-2003 3.00 PM<br>Or Next day if it is a declared Holiday |

Superintendent, District Chigateri General Hospital, Davangere, invites bids in duplicate from eligible tenderers viz., Manufacturers / Authorised Agents / Authorized Distributors for the Supply /

Installation / Commissioning of Sophisticated Medical Equipments for this Hospital in two cover bid system, as per Karnataka Transparency in public Procurements Act 1999 rules 2000.

FIRST COVER : Techno Commercial bid : Should contain Sales Tax and Income Tax Clearance Certificate, Turn over, user Certificate and Specifications of the equipment.

SECOND COVER : Price Bid : should contain only price of the equipment including all necessary accessories to commission of the equipment on turn key basis wherever necessary. (First and Second covers should be kept in Third sealed cover)

Interested tenderers can buy the tender documents from the Superintendent Chigateri District General Hospital, Davangere - 577 002 on all working days, by paying non-refundable tender form fee of Rs. 1000/- only for Medical Equipments & Rs. 500/- for Furniture in the form of Cash / D.D. in favour of Superintendent, Chigateri District Hospital, Davangere - 577 002, from
15-11-2003 To 09-12-2003 From 10 AM to 4 P.M

If considered necessary, the tenderers will have to arrange for live demonstration of equipment offered, failing which their offer is liable to be rejected. For more details contact the undersigned.

SUPERINTENDENT CHIGATERI DISTRICT
GENERAL HOSPITAL DAVANGERE

LIST OF EQUIPMENT PROPOSED TO BE PROCURED BY THE CHIGATERI DISTRICT GENERAL HOSPITAL, DAVANGERE

| Sl. No. | Name of the Equipments | Approx Requirement |
|---|---|---|
| 1. | Haemodialysis | 1 |
| 2. | Puva Chamber | 1 |
| 3. | Bi-Polar Cautery Machine | 2 |
| 4. | Ultra Sound with Trans Vaginal Probe | 1 |
| 5. | E.C.G. Machine (Automatic) | 4 |
| 6. | Electronic Foetal Monitor | 1 |
| 7. | T.M.T. Machine | 1 |
| 8. | Oxygen Concentrator | 6 |
| 9. | Neonatal Ventilator | 1 |
| 10. | Pneumatic Drill | 1 |
| 11. | Boyle's Apparatus | 4 |
| 12. | E.O. Sterlizer | 1 |
| 13. | Microscope EYE & ENT | 2 |
| 14. | Functional Sinoscopy with CCD Camera & Light Source Built in Together of 250 W. | 1 |
| 15. | Dielectric Tube Sealer | 1 |
| 16. | Blood collecting Monitor | 2 |
| 17. | Pulse Oxymeter | 4 |

SUPERINTENDENT, CHIGATERI DISTRICT
GENERAL HOSPITAL, DAVANGERE

LIST OF FURNITURES PROPOSED TO BE PROCURED BY THE CHIGATERI DISTRICT GENERAL HOSPITAL, DAVANGERE

| Sl. No. | Name of the Furniture, etc., | Approx Requirements |
|---|---|---|
| 1. | Iron Cot-Powder Coated | 100 |
| 2. | Bed Side Lockers Powder Coated | 500 |
| 3. | Steel Almirah | 20 |
| 4. | Industrial 12 Lockers | 10 |
| 5. | Refrigerators-300 LTRS Capacity | 6 |
| 6. | Oxygen Cylinder Bulk for Manifold | 40 |
| 7. | Oxygen Cylinder Big for Wards | 10 |
| 8. | Oxygen Cylinder Small - for O.T. | 10 |
| 9. | Nitrous Oxide Cylinder small-for O.T. | 10 |

SUPERINTENDENT, CHIGATERI DISTRICT
GENERAL HOSPITAL, DAVANGERE

P.D. 85

## ನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಅರಮನೆ ರಸ್ತೆ, ಬೆಂಗಳೂರು - 560 001

### ಟೆಂಡರ್

### ಸಂಖ್ಯೆ: ಸರಬರಾಜು/ಉಪಮುದ್ರಣ/ಪಿ-2004, ದಿನಾಂಕ: 17ನೇ ಅಕ್ಟೋಬರ್ 2003

ಹದಿನಾರು ಪುಟದ ಸುಮಾರು 22 ಲಕ್ಷ ಉತ್ತರ ಪತ್ರಿಕೆ ಪುಸ್ತಕಗಳನ್ನು ಮತ್ತು ನಾಲ್ಕು ಪುಟದ 30 ಲಕ್ಷ ಹೆಚ್ಚುವರಿ ಹಾಳೆಗಳನ್ನು ಹಾಗೂ 6 ಲಕ್ಷ ಪ್ರಾಕ್ಟಿಕಲ್ ಪರೀಕ್ಷೆ ಉತ್ತರ ಪತ್ರಿಕೆಗಳನ್ನು ಮುದ್ರಿಸಿ, ಹೊಲಿಗೆ ಹಾಕಿ ಜೋಡಿಸಿ, ಸ್ಟ್ಯಾಪ್ಲಿಂಗ್ ಮಾಡಿ ಪ್ಯಾಕ್ ಮಾಡಿ ಸರಬರಾಜು ಮಾಡಲು ವೆಬ್‌ಕಿಂಗ್ ಪ್ರಿಂಟಿಂಗ್ ಪ್ರೆಸ್‌ವುಳ್ಳ ದೊಡ್ಡ ಪ್ರಮಾಣದಲ್ಲಿ ಮುದ್ರಣ ಅನುಭವ ಇರುವ ಮತ್ತು ಸರ್ಕಾರಿ ಮುದ್ರಣ ಇಲಾಖೆಯಲ್ಲಿ ನೋಂದಾಯಿಸಿ ಅನುಮೋದಿಸಿಕೊಂಡಿರುವ ಪ್ರಿಂಟರ್‌ಗಳಿಂದ ಮೊಹರಾದ ಟೆಂಡರನ್ನು ಆಹ್ವಾನಿಸಲಾಗಿದೆ. ಕೆಲಸವನ್ನು ಸಂಪೂರ್ಣಗೊಳಿಸಲು ಅವಧಿ, ಕೆಲಸದ ಆದೇಶ ನೀಡಿದ ದಿನಾಂಕದಿಂದ 30 ದಿನಗಳಾಗಿರುತ್ತದೆ.

ಮೊಹರಾದ ಟೆಂಡರುಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ಸಮಯ 05-12-2003 ಮಧ್ಯಾಹ್ನ 4-00 ಗಂಟೆಯಾಗಿರುತ್ತದೆ. ಮುದ್ರಣ ಕಾರ್ಯದ ಟೆಂಡರ್ ಫಾರಂ ಪೂರ್ಣ ಕಾರ್ಯದ ವಿವರ, ನಿಯಮ, ನಿಬಂಧನೆ ಮತ್ತು ಮಾದರಿಗಳನ್ನು ಬೆಂಗಳೂರಿನ ಪ್ಯಾಲೆಸ್ ರಸ್ತೆಯಲ್ಲಿರುವ ಟೆಕ್ನಿಕಲ್ ಎಜುಕೇಷನ್ ಬಿಲ್ಡಿಂಗ್‌ನ ನೆಲಮಹಡಿಯ ಕೊಠಡಿ ಸಂಖ್ಯೆ 10 ರಲ್ಲಿ ರೂ.200-00 ಚಲನ್ ಮೂಲಕ ಪಾವತಿಸಿ ಕಛೇರಿ ವೇಳೆಯಲ್ಲಿ ಪಡೆದುಕೊಳ್ಳಬಹುದು. ಸೀಲ್ ಮಾಡಿದ ಟೆಂಡರ್ ಜೊತೆ ಇ.ಎಂ.ಡಿ. ಹಣ ರೂ. 50,000-00 ಅನ್ನು ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಹೆಸರಿಗೆ ಪಡೆದು ಸಲ್ಲಿಸತಕ್ಕದ್ದು. ತಡವಾಗಿ ಮತ್ತು ಅಪೂರ್ಣವಾಗಿ ಬಂದಂತಹ ಟೆಂಡರುಗಳನ್ನು ಕಾರಣ ನೀಡದೆ ತಿರಸ್ಕರಿಸಲಾಗುವುದು. ಟೆಂಡರನ್ನು ಒಪ್ಪುವ ಅಥವಾ ತಿರಸ್ಕರಿಸುವ ಮತ್ತು ಮುದ್ರಣ ಕಾರ್ಯ ಕಡಿಮೆ ಮಾಡುವ ಹಕ್ಕು ನಿರ್ದೇಶಕರಿಗಿರುತ್ತದೆ. ಸ್ವೀಕೃತವಾದ ಟೆಂಡರುಗಳನ್ನು ದಿನಾಂಕ 05-12-2003 ರಂದು 4-30 ಗಂಟೆಗೆ ಹಾಜರಿರುವ ಟೆಂಡರುದಾರರ ಸಮ್ಮುಖದಲ್ಲಿ ನಿರ್ದೇಶಕರ ಕೊಠಡಿಯಲ್ಲಿ ತೆರೆಯಲಾಗುವುದು.

ಪಿ.ಆರ್. 753 ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿರಸಿ ಹಾಗೂ ಸದಸ್ಯ ಕಾರ್ಯದರ್ಶಿ, ಅರಣ್ಯ ಅಭಿವೃದ್ಧಿ ಏಜೆನ್ಸಿ, ಶಿರಸಿ (ಉ.ಕ.) ಇವರ ಕಛೇರಿ

### ಅಲ್ಪಾವಧಿ ಸಂಕ್ಷಿಪ್ತ ಟೆಂಡರು ಪ್ರಕಟಣೆ

### ಕ್ರ.ಸಂಖ್ಯೆ: ಎ2-ಎನ್.ಎ.ಪಿ.-ವಿ.ವ.-4/03-04 ದಿನಾಂಕ: 17ನೇ ನವೆಂಬರ್ 2003

ಶಿರಸಿ ವಿಭಾಗ ವ್ಯಾಪ್ತಿಯಲ್ಲಿ ಸಸ್ಯಪಾಲನಾ ಕ್ಷೇತ್ರಗಳಲ್ಲಿ ಸಸಿಗಳನ್ನು ಬೆಳೆಸಲು ಪಾಲಿಥೀನ್ ಚೀಲಗಳನ್ನು ಪೂರೈಸುವ ಕುರಿತು.

ಈ ಮೂಲಕ ಸಾರ್ವಜನಿಕರಿಗೆ ಪ್ರಚುರ ಪಡಿಸುವುದೇನೆಂದರೆ, 2003-04ನೇ ಸಾಲಿಗೆ ವಿಭಾಗ ವ್ಯಾಪ್ತಿಯಲ್ಲಿ ಕೈಗೊಳ್ಳುವ ಯೋಜನೆ ಶೀರ್ಷಿಕೆಗಳ ಅರಣ್ಯೀಕರಣ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಸಸ್ಯಪಾಲನಾ ಕ್ಷೇತ್ರಗಳಲ್ಲಿ ಸಸಿಗಳನ್ನು ಬೆಳೆಸಲು ಪಾಲಿಥೀನ್ ಚೀಲಗಳನ್ನು ಪೂರೈಸಲು ಈ ವಿಭಾಗದಲ್ಲಿ 2003-04ನೇ ಸಾಲಿಗೆ ನೋಂದಾಯಿಸಿದ ಅರಣ್ಯ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ದಿ: 12-12-2003 ರಂದು ಮಧ್ಯಾಹ್ನ 3:00 ಘಂಟೆಯವರೆಗೆ ಈ ಕೆಳ ಸಹಿದಾರರ ವಿಳಾಸಕ್ಕೆ ಮೊಹರಾದ ಲಕೋಟೆಗಳಲ್ಲಿ ಸಲ್ಲಿಸಬೇಕು. ಟೆಂಡರನ್ನು ಸದರಿ ದಿನಾಂಕದಂದು 4:00ಘಂಟೆಗೆ ಈ ಕೆಳಸಹಿದಾರರು ಅಥವಾ ಅವರಿಂದ ಅಧಿಕೃತರಾದ ಅಧಿಕಾರಿಗಳು ಹಾಜರಿದ್ದ ಅರಣ್ಯ ಗುತ್ತಿಗೆದಾರರ ಸಮಕ್ಷಮ ತೆರೆಯಲಾಗುವುದು.

### ಷೆಡ್ಯೂಲ್

| ಕ್ರ. ಸಂ. | ಸಾಮಗ್ರಿ ವಿವರ | ಅಂದಾಜು ಪ್ರಮಾಣ | ಅಂದಾಜು ಮೊತ್ತ | ಇ.ಎಂ.ಡಿ. ಮೊತ್ತ | ಸಾಮಗ್ರಿ ಪೂರೈಸಬೇಕಾದ ಅವಧಿ |
|---|---|---|---|---|---|
| 1. | 5"x8" ಅಳತೆಯ (240 ಗೇಜ್) ಪಾಲಿಥೀನ್ ಚೀಲಗಳು | 1,000 ಕೆ.ಜಿ. | ರೂ.80,000.00 | ರೂ.2,000.00 | 31-12-2003 |
| 2. | 8"x12" ಅಳತೆಯ (600 ಗೇಜ್) | 1,625 ಕೆ.ಜಿ. | ರೂ.1,30,000.00 | ರೂ.3,250.00 | 31-12-2003 |
| 3. | 7"x7"x12" ಅಳತೆಯ ಚೀಲಗಳು | 16,500 ಸಂಖ್ಯೆ | ರೂ.61,050.00 | ರೂ.1,600.00 | 31-12-2003 |

**ನಿಬಂಧನೆಗಳು**

1. ಟೆಂಡರ್ ಫಾರಂನ್ನು ರೂ.200.00 ಮತ್ತು ತೆರಿಗೆ ಪಾವತಿ ಮಾಡಿ ಹರಾಜಿನ ದಿನ ಮಧ್ಯಾಹ್ನ 1:00 ಘಂಟೆಯ ಒಳಗಾಗಿ ಈ ಕಛೇರಿಯಲ್ಲಿ ಪಡೆಯಬಹುದು.
2. ದರವನ್ನು ಎಲ್ಲಾ ತೆರಿಗೆಗಳು ಸೇರಿ ಕೆ.ಜಿ. ಒಂದಕ್ಕೆ / ಇಷ್ಟು ಸಂಖ್ಯೆಗೆ ಎಷ್ಟು ಎಂದು ನಮೂದಿಸತಕ್ಕದ್ದು.
3. ಟೆಂಡರ್‌ದಾರರು ಇ.ಎಂ.ಡಿ. ಮೊತ್ತವನ್ನು ರಾಷ್ಟ್ರೀಕೃತ ಬ್ಯಾಂಕ್‌ನ ಡಿ.ಡಿ.ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿರಸಿ ವಿಭಾಗ, ಶಿರಸಿ ರವರಿಗೆ ತೆಗೆದು ಟೆಂಡರು ಫಾರಂಗೆ ಲಗತ್ತಿಸಬೇಕು. ಇ.ಎಂ.ಡಿ. ಲಗತ್ತು ಇಲ್ಲದ ಟೆಂಡರು ತಿರಸ್ಕೃತವಾಗುವುದು.
4. ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರಮಾಣವು ಅಂದಾಜು ಆಗಿದ್ದು ಹೆಚ್ಚು ಅಥವಾ ಕಡಿಮೆ ಆಗಬಹುದು. ಹಾಗೂ ಸಾಮಗ್ರಿಗಳಿಗೆ ಆಯಾ ಶೀರ್ಷಿಕೆಗಳಡಿ ಬಿಡುಗಡೆಯಾಗುವ ಅನುದಾನದ ಮಿತಿಯಲ್ಲಿ ಹಣಪಾವತಿಸಲಾಗುವುದು.
5. ಸಾಮಗ್ರಿಗಳ ಗುಣಮಟ್ಟ ಮತ್ತು ಪ್ರಮಾಣ ಪರಿಶೀಲಿಸಿ ಹಣ ಪಾವತಿಸಲಾಗುವುದು.
6. ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆದುಕೊಳ್ಳಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿರಸಿ ಹಾಗೂ ಸದಸ್ಯ ಕಾರ್ಯದರ್ಶಿ,

ಪಿ.ಆರ್. 751 ಅರಣ್ಯ ಅಭಿವೃದ್ಧಿ ಏಜೆನ್ಸಿ, ಶಿರಸಿ (ಉ.ಕ.)